ನಾಗರಸ ಕವಿಯ

# ಕರ್ಣಾಟಕ ಭಗವದ್ಗೀತೆ




ಭಾರತೀಯ ವಿದ್ಯಾಭವನ
ರೇಸ್‌ಕೋರ್ಸ್ ರಸ್ತೆ, ಬೆಂಗಳೂರು - 560 001




ಪೂಜ್ಯ ಮಾತಾಪಿತೃಗಳಾದ
ಶ್ರೀ ಪತ್ತಿ ಆದಿನಾರಣಯ್ಯ ಮತ್ತು ಶ್ರೀಮತಿ ರಾಮಲಕ್ಷ್ಮಮ್ಮ
ಅವರ ಸವಿನೆನಪಿನಲ್ಲಿ

ಪತ್ತಿ ಶ್ರೀಧರ ಶಾಂತಾ ಚಾರಿಟಬಲ್ ಟ್ರಸ್ಟ್
ಬೆಂಗಳೂರು

# ಪ್ರಸ್ತಾವನೆ

ಸಕಲ ಶಾಸ್ತ್ರಗಳ ಸಾರವನ್ನೂ ಹೊಂದಿ 'ಸರ್ವಶಾಸ್ತ್ರಮಯೀ ಗೀತಾ' ಎಂದು ಪ್ರಸಿದ್ಧಿ ಪಡೆದಿರುವ ಮತ್ತು ಸ್ವಯಂ ಭಗವಾನ್ ಶ್ರೀಕೃಷ್ಣನ ಸಾಕ್ಷಾತ್ ಮುಖಾರವಿಂದದಿಂದಲೇ ಹೊರಬಂದಿರುವ 'ಗೀತಾಮೃತಸಾರ'ದಿಂದ ಮಾನವರಿಗೆ ಕರ್ಮಬಂಧನದ ತೊಡಕಿನಿಂದ ಬಿಡುಗಡೆಯ ದಾರಿಯನ್ನು ತೋರಿಸುವಂತಹ ವಿಶ್ವದ ಏಕೈಕ ಸದ್ಗ್ರಂಥವೇ ಭಗವದ್ಗೀತೆ. ಆದ್ದರಿಂದಲೇ ಇಂದಿಗೂ ಭಗವದ್ಗೀತೆಯನ್ನು ಇಡೀ ವಿಶ್ವದಲ್ಲಿಯೇ ಅರಿತವರೆಲ್ಲರೂ ಪವಿತ್ರ ಗ್ರಂಥವಾಗಿ ಸ್ವೀಕರಿಸಿ ಮನನ ಮಾಡುತ್ತಿದ್ದಾರೆ. ಸಂಸ್ಕೃತದ ವ್ಯಾಸಭಾರತವನ್ನೇ ಆಧರಿಸಿ ನಮ್ಮ ಮಹಾಕವಿ ಕುಮಾರವ್ಯಾಸನು ಕನ್ನಡದಲ್ಲಿ ರಚಿಸಿರುವ 'ಕರ್ಣಾಟ ಭಾರತ ಕಥಾ ಮಂಜರಿ'ಯಲ್ಲಿ ಭಗವದ್ಗೀತೆಯ ಸಾರಾಂಶವನ್ನು ಕೆಲವೇ ಪದ್ಯಗಳಲ್ಲಿ ಹಿಡಿದಿಟ್ಟಿದ್ದಾನೆ. ಆದರೆ ಕವಿ ನಾಗರಸನು ಸಂಸ್ಕೃತ ಭಗವದ್ಗೀತೆಯ 700 ಶ್ಲೋಕಗಳನ್ನೂ ಪೂರ್ಣವಾಗಿ (ಭಾಮಿನಿ ಷಟ್ಪದಿಯಲ್ಲಿಯೇ) ಅಷ್ಟೇ ಸಂಖ್ಯೆಯ ಕನ್ನಡ ಪದ್ಯಗಳನ್ನಾಗಿ ಅನುವಾದಿಸಿ ಬರೆದ 'ನಾಗರಸನ ಕರ್ಣಾಟಕ ಭಗವದ್ಗೀತೆ' ಒಂದು ಅನರ್ಘ್ಯವಾದ 'ಕನ್ನಡ ಭಗವದ್ಗೀತೆ'ಯಾಗಿದೆ. ಇದನ್ನು ಓದುವವರಿಗೆ ಬಹುಶಃ, ಕುಮಾರವ್ಯಾಸನೇ ಇದನ್ನು ಪ್ರತ್ಯೇಕವಾಗಿ ರಚಿಸಿರ ಬೇಕೆನಿಸುವಷ್ಟು ಸರಳ ಸುಂದರವಾಗಿದ್ದು ಸಾಮಾನ್ಯರಿಗೂ ಅರ್ಥ ವಾಗುವುದರ ಜೊತೆಗೆ ಸಂಸ್ಕೃತದ ಮೂಲ ಭಗವದ್ಗೀತೆಯ ಅರಿವನ್ನು ಮೂಡಿಸುವಲ್ಲಿ ಈ ಕನ್ನಡ ಪದ್ಯಗಳು ಯಶಸ್ವಿಯಾಗಿವೆಯೆಂದು ಹೇಳಬಹುದಾಗಿದೆ.

ಭಾರತೀಯ ವಿದ್ಯಾಭವನದ ಬೆಂಗಳೂರು ಕೇಂದ್ರದ ನಿರ್ದೇಶಕರಾದ ಪದ್ಮಶ್ರೀ ಪ್ರಶಸ್ತಿ ಪುರಸ್ಕೃತ ಡಾ. ಮತ್ತೂರು ಕೃಷ್ಣಮೂರ್ತಿಯವರು

ಹಾಗೂ ಕುಮಾರವ್ಯಾಸ ಪ್ರಶಸ್ತಿ ಪುರಸ್ಕೃತ ಗಮಕ ವಿದ್ವಾನ್ ಹೊಸಹಳ್ಳಿ ಕೇಶವಮೂರ್ತಿಯವರು ಉದಯ ಟಿ.ವಿ. ಚಾನೆಲ್‌ನಲ್ಲಿ ನಡೆಸಿಕೊಡುತ್ತಿರುವ ಮಹಾಭಾರತ ವಾಚನ-ವ್ಯಾಖ್ಯಾನ ಕಾರ್ಯ ಕ್ರಮದಲ್ಲಿ ನಾಗರಸನ ಕರ್ಣಾಟಕ ಭಗವದ್ಗೀತೆಯನ್ನು ವ್ಯಾಖ್ಯಾನಕ್ಕೆ ಬಳಸುವುದರ ಮೂಲಕ ಕನ್ನಡ ವೀಕ್ಷಕರಲ್ಲಿ ಈ ಕಾವ್ಯದ ಬಗೆಗೆ ಒಲವು ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಈ ಒಲವಿನ ಫಲವಾಗಿಯೇ ಈಗ ಭಾರತೀಯ ವಿದ್ಯಾಭವನದ ಮೂಲಕ ಈ ಕಾವ್ಯವು ನಾಲ್ಕನೆಯ ಮುದ್ರಣಕ್ಕೆ ಸಿದ್ಧವಾಗಿದೆ ಮತ್ತು ಮತ್ತೂರ್‌ಜಿ ಅವರನ್ನು ವಿಶೇಷವಾಗಿ ಗೌರವಿಸುವ ದಾನಿಗಳಾದ ಶ್ರೀ ಪತ್ತಿ ಶ್ರೀಧರ್ ಅವರು ಈ ಮುದ್ರಣಕಾರ್ಯಕ್ಕೆ ಅಗತ್ಯವಾದ ಹಣವನ್ನು ನೀಡುತ್ತಿದ್ದಾರೆ. ಇದು ನನಗೆ ಅತ್ಯಂತ ಹೆಮ್ಮೆಯ ಹಾಗೂ ಸಂತೋಷದ ವಿಷಯವಾಗಿದೆ.

ಈ ಕಾವ್ಯವನ್ನು ಜನಪ್ರಿಯಗೊಳಿಸಿರುವ ವ್ಯಾಖ್ಯಾನರತ್ನ ಡಾ. ಮತ್ತೂರು ಕೃಷ್ಣಮೂರ್ತಿಯವರಿಗೂ ಮತ್ತು ದಾನಿಗಳಾದ ಶ್ರೀ ಪತ್ತಿ ಶ್ರೀಧರ್ ಮತ್ತು ಅವರ ಕುಟುಂಬವರ್ಗದವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಈ ಮಹತ್ಕಾವ್ಯವನ್ನು ಕನ್ನಡಿಗರು ಆದರದಿಂದ ಸ್ವಾಗತಿಸುವರೆಂದು ಆಶಿಸುತ್ತೇನೆ.

ಬೆಂಗಳೂರು
06-05-2011

**ಎನ್. ರಾಮಾನುಜ**
ಅಧ್ಯಕ್ಷರು
ಭಾರತೀಯ ವಿದ್ಯಾಭವನ
ಕರ್ನಾಟಕ

# ನಾಗರಸನ ಕರ್ಣಾಟಕ ಭಗವದ್ಗೀತೆ

ನಾಗರಸನು ರಚಿಸಿರುವ ಏಕೈಕ ಕೃತಿ 'ಕರ್ಣಾಟಕ ಭಗವದ್ಗೀತೆ'. ಇದರ ಹಸ್ತಪ್ರತಿಯು ದೊರೆತುದು ಮಧುಗಿರಿಯಲ್ಲಿ ವಕೀಲರಾಗಿದ್ದ ಶ್ರೀನಿವಾಸರಾಯರೆಂಬವರ ಮನೆಯಲ್ಲಿದ್ದ ತಾಳೆಗರಿಗಳ ಕಂತೆಯಲ್ಲಿ. ಶ್ರೀನಿವಾಸರಾಯರು ಸ್ಮಾರ್ತ ಬ್ರಾಹ್ಮಣರು; ವೈದಿಕ ಕರ್ಮನಿಷ್ಠರು. ಈ ಹಸ್ತಪ್ರತಿ ಕಣ್ಣಿಗೆ ಬಿದ್ದುದು 19ನೆಯ ಶತಮಾನದ ಕೊನೆಯ ಭಾಗದಲ್ಲಿ, ಮುದ್ರಣವಾದುದು 20ನೇ ಶತಮಾನದ ಆದಿಯಲ್ಲಿ; 1908ರಲ್ಲಿ ಅದನ್ನು ಮೊದಲು ಮುದ್ರಣಕ್ಕೆ ಸಿದ್ಧಪಡಿಸಿದವರು ಮೈಸೂರಿನ ಅರಸರ ಆಸ್ಥಾನದಲ್ಲಿ ವಿದ್ವಾಂಸರಾಗಿದ್ದ ಸೋಸಲೆ ಅಯ್ಯ ಶಾಸ್ತ್ರಿಗಳು. ಅವರು ಶ್ರೀನಿವಾಸರಾಯರ ಸಂಬಂಧಿಗಳು. ಸುಮಾರು ಮೂವತ್ತು ವರ್ಷಗಳ ಬಳಿಕ ಈ ಪುಸ್ತಕವು ಮತ್ತೆ ಮುದ್ರಣವಾಯ್ತು. ಅದನ್ನು ಮುದ್ರಣಕ್ಕೆ ಸಿದ್ಧಪಡಿಸಿದವರು ಚೀಮನ ಹಳ್ಳಿ ರಘುನಾಥಾಚಾರ್ಯರು. ಆ ಮುದ್ರಣವೂ ಬೇಗ ಮಾರಾಟವಾಗಿ ಪುಸ್ತಕವು ಅನುಪಲಬ್ಧವಾಯಿತು. ಆಗ ಶ್ರೀನಿವಾಸರಾಯರ ಮೊಮ್ಮಗನಾದ ಶ್ರೀ ಕೆ. ಲಕ್ಷ್ಮೀನರಸಿಂಹಮೂರ್ತಿ ಎಂಬ ಉಪನ್ಯಾಸಕರು 1984ರಲ್ಲಿ ಮರುಮುದ್ರಣಕ್ಕೆ ಪ್ರಯತ್ನಪಟ್ಟರು. ಆ ಸಮಯದಲ್ಲಿ ಬೆಂಗಳೂರಿನ ಜಯನಗರದ ಮೂರನೇ ಬ್ಲಾಕಿನಲ್ಲಿರುವ 'ಶಂಕರ ಕೃಪಾ' ಎಂಬ ಸಂಸ್ಥೆಯ ಕಾರ್ಯದರ್ಶಿಗಳು ನನ್ನ ಬಳಿಗೆ ಬಂದು ಆ ಪುಸ್ತಕದ ಪುನರ್ಮುದ್ರಣಕ್ಕೆ ಅದನ್ನು ಸಿದ್ಧಪಡಿಸಬೇಕೆಂದು ಸೂಚಿಸಿದರು. ಆ ಮುದ್ರಣವನ್ನು ನಾನು ಪರಿಶೀಲಿಸಿದಾಗ ಅದರಲ್ಲಿ ಅನೇಕ ಮುದ್ರಣ ಸ್ಖಾಲಿತ್ಯಗಳೂ ಛಂದೋಲೋಪಗಳೂ ಇರುವುದು ಕಂಡುಬಂದಿತು. ಆದರೆ ಆ ಲೋಪಗಳನ್ನು ಸರಿಪಡಿಸಬೇಕಾದರೆ ಹೆಚ್ಚು ಕಷ್ಟಪಡಬೇಕಾಗಿರಲಿಲ್ಲ.

ನಾನು ಸಂಸ್ಕೃತದ ಮೂಲವನ್ನು ಹತ್ತಿರದಲ್ಲಿ ಇಟ್ಟುಕೊಂಡು ಪ್ರತಿ
ಪದ್ಯವನ್ನೂ ನಿಧಾನವಾಗಿ ಪರಿಶೀಲಿಸಿ ಅದನ್ನು ಮುದ್ರಣಕ್ಕೆ ಸಿದ್ಧಪಡಿಸಿದೆ.

ಈ ಪುಸ್ತಕವನ್ನು ಓದುವಾಗ ಅದರ ಸರಳ ಕನ್ನಡ ಭಾಷೆಯನ್ನು
ಓದಿ ನನಗೆ ತುಂಬ ಸಂತೋಷವಾಯ್ತು. ಭಗವದ್ಗೀತೆಯ ಒಂದು ಶ್ಲೋಕಕ್ಕೆ
ಒಂದೇ ಭಾಮಿನೀ ಷಟ್ಪದಿಯಲ್ಲಿ ಅನುವಾದ ಮಾಡಿರುವುದು ಎಷ್ಟು
ಸೂಕ್ತವಾಗಿದೆ ಎಂದರೆ ಸಾಮಾನ್ಯ ಓದುಗರಿಗೆ ಕೂಡ ಮೂಲಗ್ರಂಥದ
ಅರಿವಾಗಬಹುದು ಎಂಬುದು ಸ್ಪಷ್ಟವಾಗುತ್ತದೆ. ಹದಿನೆಂಟನೆಯ
ಶತಮಾನದ ಕನ್ನಡದ ಆಡುಮಾತಿಗೆ ಅದು ಹತ್ತಿರ ಹತ್ತಿರವಾಗಿದೆ. ರಾವ್
ಬಹದ್ದೂರ್ ನರಸಿಂಹಾಚಾರ್ಯರು ಈ ಗ್ರಂಥ ರಚನೆಯನ್ನು 1650ಕ್ಕೆ
ಹೊಂದಿಸಿದ್ದಾರೆ. ಆ ಕಾಲನಿರ್ಧಾರವು ಸರಿಯಾಗಿದೆ ಎನ್ನಿಸುತ್ತದೆ.

ನಾಗರಸನ ತಂದೆ ಕಾಶ್ಯಪಗೋತ್ರದ ಯೋಗಿ ಭಿಕ್ಷೇಶ್ವರ ಎಂಬ
ಹೆಸರಿನವರು: ಈ ವಂಶದ ಹಿರಿಯರು ವೇದೋಪನಿಷತ್ತುಗಳಲ್ಲಿ
ನಿಷ್ಣಾತರಾಗಿದ್ದ ಪ್ರಾಚೀನ ಸಂಪ್ರದಾಯಸ್ಥರು. ತಂದೆಯಿಂದ ಸಂಸ್ಕೃತವನ್ನು
ಕಲಿತ ನಾಗರಸನು ಶಂಕರರೆಂಬ ಗುರುಗಳಿಂದ ಭಗವದ್ಗೀತೆಯನ್ನು ಚೆನ್ನಾಗಿ
ಅಭ್ಯಾಸ ಮಾಡಿರಬೇಕು. ಆ ಗ್ರಂಥವನ್ನು ಕನ್ನಡಕ್ಕೆ ಅನುವಾದಿಸಬೇಕೆಂಬ
ಆಸೆಯಿಂದ ಶಂಕರಗುರುಗಳ ಕಣ್ಣರಿಕೆಯಲ್ಲಿ ಈ ಕೆಲಸವನ್ನು ಸಾಧಿಸಿದ್ದಾನೆ.
ಆದ್ದರಿಂದಲೇ ಗ್ರಂಥದ ಪೀಠಿಕಾ ಭಾಗದಲ್ಲಿ **‘ಶಂಕರ ಗುರು ನಿರೀಕ್ಷಿಸಲಾಗಿ
ಆನಂದದಿಂದಾತ್ಮಪದದಿಂ ಬೇಗದಿಂ ನಡಸಿದೆನು’** ಎಂದು ಕೃತಜ್ಞತೆಯಿಂದ
ಹೇಳಿದ್ದಾನೆ. ಅಲ್ಲದೆ **‘ಪದಕ್ಕೊಂದೊಂದು ಗ್ರಂಥವ ಸಾಧಕರು ತಿಳಿವಂತೆ
ಕನ್ನಡದಿಂದ ರಚಿಸಿದೆನು’** ಎಂಬ ವಿಶಿಷ್ಟ ವಿವರವನ್ನು ತಿಳಿಸಿದ್ದಾನೆ.
ಒಂದು ಶ್ಲೋಕಕ್ಕೆ ಒಂದೇ ಷಟ್ಪದಿಯಲ್ಲಿ ಅರ್ಥವು ಹೊಂದುವಂತೆ ರಚನೆ
ಮಾಡಿದ್ದಾನೆ. ಇದು ತುಂಬ ಕಷ್ಟವಾದ ಕಾರ್ಯ. ಆದರೆ ನಾಗರಸನು
ಅದರಲ್ಲಿ ಸಫಲನಾಗಿದ್ದಾನೆ. ಅವನಿಗೆ ಸಂಸ್ಕೃತದ ಭಗವದ್ಗೀತೆಯ ಅರ್ಥವು
ಎಷ್ಟು ಸ್ಪಷ್ಟವಾಗಿತ್ತೆಂಬುದು ತಿಳಿದುಬರುತ್ತದೆ.

ಈ ಪುಸ್ತಕದ ಸರಳ ಕನ್ನಡ ಭಾಷೆಗೆ ಮಾರುಹೋಗಿ ಅದರ ಬಗ್ಗೆ ಕೆಲವು ದೃಷ್ಟಾಂತಗಳನ್ನು ಕೊಟ್ಟು ಸುಮಾರು 25 ಪುಟಗಳ ಒಂದು ಮುನ್ನುಡಿಯನ್ನು ಬರೆದಿದ್ದೆ. ಆದರೆ ಅದು ಮುದ್ರಣವಾಗದೆ ಪುಸ್ತಕವು ಸಂಪೂರ್ಣವಾಗಿ ಮುದ್ರಣವಾಗಿ. ಬೈಂಡಾಗಿ ಮಾರಾಟಕ್ಕೆ ಹಂಚಲಾಗಿತ್ತು. ನನ್ನ ಮುನ್ನುಡಿ ಮುದ್ರಣಾಲಯದಲ್ಲಿ ಮಾಯವಾಗಿತ್ತು.

ಈಗ ಮತ್ತೆ ಈ ಗ್ರಂಥಕ್ಕೆ ನಾಲ್ಕನೆಯ ಮುದ್ರಣದ ಯೋಗ ಕೂಡಿಬಂದಿದೆ. ಭಾರತೀಯ ವಿದ್ಯಾಭವನದ ನಿರ್ದೇಶಕರಾದ ನನ್ನ ತರುಣಮಿತ್ರ ಶ್ರೀ ಮತ್ತೂರು ಕೃಷ್ಣಮೂರ್ತಿಗಳು ಇದನ್ನು ಪ್ರಕಟಿಸಲು ಮುಂದೆ ಬಂದಿದ್ದಾರೆ. ಬಹು ಸಮರ್ಥರಾದ ಪ್ರಕಾಶಕರು ಈ ಪುಸ್ತಕಕ್ಕೆ ದೊರೆತಂತಾಗಿ ನನಗೆ ಸಂತೋಷವಾಗಿದೆ. ಕುಮಾರವ್ಯಾಸ ಭಾರತದ ವ್ಯಾಖ್ಯಾನಕಾರರಾಗಿ ಶ್ರೀ ಕೃಷ್ಣಮೂರ್ತಿಗಳು ಈ ಗ್ರಂಥದಲ್ಲಿ ಕುಮಾರ ವ್ಯಾಸನ ಪ್ರಭಾವವನ್ನು ಗುರುತಿಸಿದ್ದಾರೆ. ನನಗೆ ಈ ವಿಷಯ ಮುಖ್ಯವಾದುದು. ಏಕೆಂದರೆ ಇನ್ನು ಇದರ ಮುದ್ರಣ ಅತ್ಯಂತ ಸುಂದರವಾಗಿರುತ್ತದೆಂಬ ಬಗ್ಗೆ ಸಂದೇಹವಿಲ್ಲ. ನಾನು ಅವರಿಗೆ ಯಶಸ್ಸನ್ನು ಕೋರುತ್ತೇನೆ.

ನಾಗರಸನ ಅನುವಾದ ಎಷ್ಟು ಚೆನ್ನಾಗಿದೆ ಎಂಬುದನ್ನು ತಿಳಿಸಲು ಒಂದೆರಡು ಉದಾಹರಣೆಗಳನ್ನು ನೀಡಿ ಈ ಪುಸ್ತಕವನ್ನು ಓದುಗರ ಗಮನಕ್ಕೆ ತರಲು ಬಯಸುತ್ತೇನೆ.

ಒಂದು ಶ್ಲೋಕದ ಅರ್ಥಸಂಪತ್ತಿಯನ್ನೂ ಶಬ್ದಸಂಪತ್ತಿಯನ್ನೂ ಇಡೀ ಷಟ್ಪದಿಯಲ್ಲಿ ತುಂಬುವುದು ಕ್ಲಿಷ್ಟವಾದ ಕಾರ್ಯ; ಅದು ಮಹಾಸಾಧನೆ. ಒಂದೆರಡು ಉದಾಹರಣೆಗಳನ್ನು ನೋಡೋಣ. ಭಗವದ್ಗೀತೆಯ ಆರನೇ ಅಧ್ಯಾಯ–ಧ್ಯಾನ ಯೋಗದ 14ನೆಯ ಮತ್ತು 15ನೆಯ ಶ್ಲೋಕಗಳು ಹೀಗಿವೆ:-

ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।
ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ (6-14)
ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।
ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ (6-15)

ಈ ಪದ್ಯಗಳಿಗೆ ಸಂಬಂಧಿಸಿದಂತೆ ಡಾ. ಸರ್.ಎಸ್. ರಾಧಾಕೃಷ್ಣನ್ ಅವರು ಹೀಗೆ ಅನುವಾದ ಮಾಡಿದ್ದಾರೆ: "Serene and fearless, firm in the vow of celibacy, subdued in mind, let him sit, harmonized, his mind turned to me and intent on me alone" ಇದಕ್ಕೆ ಅವರೇ ಒಂದು ವಿವರವನ್ನು ನೀಡಿದ್ದಾರೆ. ಅದು ಹೀಗಿದೆ: "It is not ascetic celibacy that is meant by Bramhacharya, but Control. Hindu tradition affirms that a householder who controls his sex life is a Brahmachari" quite as truly as one who abstains from sex altogether

ಈ ಅರ್ಥವನ್ನು ಕನ್ನಡದ ಪ್ರಸಿದ್ಧ ನುಡಿಗಟ್ಟು 'ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ' ಎಂಬುದು ವ್ಯಕ್ತಪಡಿಸುತ್ತದೆ. ಈ ನುಡಿಗಟ್ಟಿಗೆ ಆಧಾರ ಭರತೇಶ ವೈಭವದ ರತ್ನಾಕರವರ್ಣಿಯ ಪದ್ಯ. ಅದು ಹೀಗಿದೆ:

ಉಂಡುಪವಾಸಿ ಬಳಸಿ ಬ್ರಹ್ಮಚಾರಿ
ಮಂಡಲವಿದ್ದೂ ನಿಸ್ಸಂಗ
ಮಂಡೆ ಬೆಳೆದು ಮನಬೋಳಾದ ತಪಸಿಯ
ಕೊಂಡಾಡಲಳವೇ ಚಕ್ರಿಯನು

ನಾಗರಸನು ಭಗವದ್ಗೀತೆಯಲ್ಲಿ ಅಡಗಿರುವ ಅರ್ಥವನ್ನು ತನ್ನ ಪದ್ಯಗಳಲ್ಲಿ ತಿಳಿಸಿರುವ ರೀತಿಯನ್ನು ಗಮನಿಸಿ.

ಹದುಳಿಸಿದ ವರಚಿತ್ತವುಳ್ಳವ
ನೊದವಿದಂಜಿಕೆಯಿಲ್ಲದೇ ಶ್ರುತಿ
ವಿದಿತ ವಿಮಲ ಬ್ರಹ್ಮಚರ್ಯವ್ರತವ ಚರಿಸುತಿಪ
ತುದಿಗೆ ಮನವನು ನಿಲಿಸಿಯೆನ್ನಲಿ
ಪುದಿದ ಚಿತ್ತವನುಳ್ಳ ಯೋಗಿಯು
ಮುದದಲೆನ್ನಲಿ ಲೀನವಾಗಿಹನೆಂದನಸುರಾರಿ (6-14)

ಈ ಪರಿಯ ನಿಯಮಿಸಿದ ಚಿತ್ತದ
ರೂಪವುಳ್ಳವನಾಗಿ ಬ್ರಹ್ಮದ
ರೂಪನನುದಿನ ಚಿಂತಿಸುತ ವರಯೋಗಿಯಾದವನು
ತಾಪವಳಿದೆನ್ನಯ ಪರಮ ಸುಖ
ರೂಪವನು ಕೂಡಿರ್ದು ನಿಜ ಚಿ
ದ್ರೂಪವೆನಿಸುವ ಶಾಂತಿ ಪದವನು ಪಡೆವ ಕೇಳೆಂದ (6-15)

ಬ್ರಹ್ಮಚರ್ಯವ್ರತವ ಎಂಬುದರ ಅರ್ಥವನ್ನು ವಿಸ್ತಾರಗೊಳಿಸುವ **'ವಿದಿತ, ವಿಮಲ'** ಎಂಬ ಎರಡು ಗುಣವಾಚಕಗಳನ್ನು ಸೇರಿಸಿ ಹೇಗೆ ಅರ್ಥವನ್ನು ಸ್ಪಷ್ಟಪಡಿಸುತ್ತಾನೆ ಕವಿ ಎಂಬುದು ಬಹುಮುಖ್ಯವಾಗುತ್ತದೆ.

ಮತ್ತೊಂದು ಉದಾಹರಣೆ ಭಗವದ್ಗೀತೆಯ ಒಂಬತ್ತನೆಯ ಅಧ್ಯಾಯದ ಇಪ್ಪತ್ತೆರಡನೆಯ ಶ್ಲೋಕ. ಅದು ಹೀಗಿದೆ :

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ
(9-22)

''ಯಾರು ನನ್ನನ್ನು (ಭಗವಂತನನ್ನು) ವಿನಾ ಬೇರಾರನ್ನೂ, ಬೇರಾವುದನ್ನೂ ಚಿಂತಿಸದೆ, ಭಗವದುಪಾಸನೆ ಮಾಡುತ್ತಾ ಸರ್ವದಾ

ಭಗವಂತನೊಬ್ಬನನ್ನೇ ಹಿಡಿದಿರುತ್ತಾರೋ ಅಂಥ ಭಕ್ತರ ಯೋಗಕ್ಷೇಮದ ಭಾರವನ್ನು ನಾನು (ಭಗವಂತ) ವಹಿಸಿಕೊಂಡಿರುತ್ತೇನೆ.''

ಆರು ಕೆಲಬರು ನನ್ನನೇ ನೆರೆ
ಸಾರಿ ಚಿಂತಿಸುವರು ಬಿಡದೆ
ಧೀರರುಗಳೆನ್ನನು ಯಜಿಪರಾ ನಿತ್ಯಮುಕ್ತರಿಗೆ
ಸಾರತರ ಪರಲೋಕಲಾಭದು
ದಾರದಿಹಲೋಕದ ಸುಖಂಗಳ
ಸೇರುವೆಯ ರಕ್ಷೆಯನು ತಾ ವಹಿಸುವೆನು ಕೇಳೆಂದ ||(9-22)

ಹೀಗೆ ಅನೇಕ ದೃಷ್ಟಾಂತಗಳನ್ನು ನೀಡಬಹುದು. ಆದರೆ ಅದರ ಅಗತ್ಯವಿಲ್ಲ. ಈ ಗ್ರಂಥವು ಪ್ರಾಚೀನ ಸಂಪ್ರದಾಯದ ಸ್ಮಾರ್ತ ಮನೆಗಳಲ್ಲಿ ಬಹುವಾಗಿ ಉಪಯೋಗದಲ್ಲಿದೆ. ಆದುದರಿಂದ ಈ ಮುದ್ರಣದ ಅಗತ್ಯವೂ ಇತ್ತು.

ಶ್ರೀ ಮತ್ತೂರು ಕೃಷ್ಣಮೂರ್ತಿಗಳ ಪ್ರಯತ್ನಕ್ಕೆ ಸಾಕಷ್ಟು ಜನಪ್ರಿಯತೆ ದೊರೆಯಲಿ ಎಂದು ನಾನು ಹಾರೈಸುತ್ತೇನೆ.


58, 31ನೇ ಕ್ರಾಸ್
7ನೇ ಬ್ಲಾಕು, ಜಯನಗರ
ಬೆಂಗಳೂರು – 560 070

ಜಿ. ವೆಂಕಟಸುಬ್ಬಯ್ಯ
ಸಂಪಾದಕರು


26–4–2011

## ಕಾಣದ ಕೈಗಳ ಕೃಪೆ !

ಯಾವುದೇ ಒಂದು ಒಳ್ಳೆಯ ಕಾರ್ಯವನ್ನು ನಡೆಸಲು ನಾವು ಸಂಕಲ್ಪ ಮಾಡಿದರೆ, ಭಗವಂತನ ಕಾಣದ ಕೈಗಳು ಅದಕ್ಕೆ ಸಹಾಯ ಮಾಡುವುದೆಂದು ಖಚಿತವಾಗಿ ನಂಬಲು ಅನೇಕ ನಿದರ್ಶನಗಳಿವೆ.

ಮೈಸೂರಿನಲ್ಲೊಮ್ಮೆ ನಾನು ಮತ್ತು ನನ್ನ ಮಿತ್ರ ಶ್ರೀ ಹೊಸಹಳ್ಳಿ ಕೇಶವಮೂರ್ತಿಯವರು ಕುಮಾರವ್ಯಾಸ ಭಾರತ ವಾಚನ - ವ್ಯಾಖ್ಯಾನ ಕಾರ್ಯಕ್ರಮವೊಂದನ್ನು ನಡೆಸುತ್ತಿದ್ದಾಗ ಭಗವದ್ಗೀತೆಯ ಪ್ರಸ್ತಾಪವಾಯಿತು. ಕುಮಾರವ್ಯಾಸನು, ಭಗವದ್ಗೀತೆಯನ್ನು ಎಲ್ಲರೂ ತಿಳಿದಿದ್ದಾರೆಂದೋ ಏನೋ, ಇಡೀ ಗೀತೆಯ ಸಾರಸರ್ವಸ್ವವನ್ನೂ ಕೇವಲ 30 ಪದ್ಯಗಳಲ್ಲಿ ಭಟ್ಟಿ ಇಳಿಸಿದ್ದಾನೆಂದು ಹೇಳಿ, ಅದರ ಜೊತೆಗೇ ನನ್ನ ಮನಸ್ಸಿನಲ್ಲಿದ್ದ ಮಾತುಗಳನ್ನು ಪ್ರೇಕ್ಷಕರೊಡನೆ ಹಂಚಿಕೊಂಡೆ. ನಾವು. ಎಚ್.ಎಂ.ಟಿ. ಯವರು ಮಾಡಿಸಿದ ಸಂಪೂರ್ಣ ಕುಮಾರವ್ಯಾಸ ಭಾರತದ ಆಡಿಯೋ ರೆಕಾರ್ಡಿಂಗ್ ಸಮಯದಲ್ಲಿ ಅವನು ಬರೆದಿರುವಷ್ಟೇ ಪದ್ಯಗಳನ್ನು ಸ್ವಲ್ಪ ಹೆಚ್ಚಿನ ವ್ಯಾಖ್ಯಾನ ಮಾಡಿ ಪೂರ್ಣಗೊಳಿಸಿದ್ದೆ. ಆದರೂ 'ಗೀತೆಯ ಪೂರ್ಣ ಪ್ರಮಾಣದ ಕನ್ನಡ ಕಾವ್ಯ ದೊರೆತರೆ ಎಷ್ಟು ಚೆನ್ನಾಗಿರುತ್ತದೆ' ಎಂದುಕೊಳ್ಳುತ್ತಿದ್ದೆ. ಅದೇ ಮಾತನ್ನು ನಾನು ಆ ದಿನ ಮೈಸೂರಿನ ಕಾವ್ಯ ಸಹೃದಯರ ಮುಂದೆ ಹೇಳಿದೆ. ಆ ಸಮಯದಲ್ಲಿ ಕಾರ್ಯಕ್ರಮ 15 ದಿನಗಳವರೆಗೆ ನಡೆದಿದ್ದು, ನಾನು ಈ ಮಾತು ಹೇಳಿದ ಮೂರು-ನಾಲ್ಕು ದಿನಗಳಲ್ಲೇ ಸಜ್ಜನರೊಬ್ಬರು ಹಳೆಯ ಪುಸ್ತಕಗಳ ಕಟ್ಟೊಂದನ್ನು ತಂದಿದ್ದು ನಾನು ಕಥೆ ಮಾಡಿದ ನಂತರ ಹೊರಬರುತ್ತಿದ್ದಾಗ ನನ್ನ ಬಳಿ ಬಂದು ಆ ಕಟ್ಟನ್ನು ಕೊಟ್ಟರು. ''ಇದರಲ್ಲಿ ಯಾವ ಪುಸ್ತಕಗಳಿವೆಯೋ, ಅದು ನಮಗಂತೂ ಉಪಯೋಗವಾಗದು. ತಮಗೇನಾದರೂ ಉಪಯೋಗವಾದರೆ ಅಷ್ಟೇ ಸಾರ್ಥಕ'' ಎಂದು ಹೇಳಿದರು. ಪರಸ್ಪರ ವಂದಿಸಿಕೊಂಡು ನಾವು

ಬೀಳ್ಕೊಂಡೆವು. ಅದಾದ ನಂತರ ಆ ಸಜ್ಜನರನ್ನು ನಾವು ಈವರೆಗೆ ಭೇಟಿ ಮಾಡಲಿಲ್ಲ!

ಆದರೆ ಅವರು ಅಂದುಕೊಟ್ಟ ಆ ಕಟ್ಟಿನಲ್ಲಿ ನಾಗರಸನ 'ಕನ್ನಡ ಭಗವದ್ಗೀತೆ' ಇದ್ದುದೇ ದೈವವು ನಮಗೆ ಮಾಡಿದ ಸಹಾಯ! ನಾಗರಸನು ಗೀತೆಯ ಸಂಸ್ಕೃತದ ಪ್ರತಿ ಶ್ಲೋಕಕ್ಕೊಂದರಂತೆ ಕನ್ನಡಕ್ಕೆ ಅನುವಾದಿಸಿ ಭಾಮಿನಿ ಷಟ್ಪದಿಯಲ್ಲಿ ಬರೆದಿಟ್ಟಿದ್ದಾನೆ. ಇದನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ನನ್ನ ಮಿತ್ರ ಶ್ರೀ ಕೇಶವಮೂರ್ತಿಯವರೂ ಸಹ 'ವಾಚನ ಮಾಡಲೂ ಸೊಗಸಾದ ತಿಳಿಗನ್ನಡದ ಪದ್ಯಗಳು ಇವು. ಕುಮಾರವ್ಯಾಸನೇ ಬರೆದಿರುವಂತಿದೆ' ಎಂದು ಹೇಳಿ ನನ್ನ ಮನಸ್ಸಿನ ಮಾತುಗಳಿಗೆ ಧ್ವನಿಕೊಟ್ಟರು. ಹೇಗಾದರೂ ಈ ಕನ್ನಡ ಭಗವದ್ಗೀತೆಯನ್ನು ಜನರಿಗೆ ಮುಟ್ಟಿಸಬೇಕೆಂದು ನಾವು ಅಂದುಕೊಳ್ಳುತ್ತಿರುವಾಗಲೇ ಉದಯ ಟಿ.ವಿ.ಯಲ್ಲಿ ನಮ್ಮ ಕಾರ್ಯಕ್ರಮ ಭಗವದ್ಗೀತೆಗೆ ಬಂದು ಮುಟ್ಟಿತು. ನಾವು ಈ ಪದ್ಯಗಳನ್ನು ವಾಚನ-ವ್ಯಾಖ್ಯಾನಕ್ಕೆ ಅಳವಡಿಸಿಕೊಂಡೆವು. ಬಹಳ ಜನ ವೀಕ್ಷಕರು ಈ ಕನ್ನಡ ಭಗವದ್ಗೀತೆಯ ಬಗ್ಗೆ ಕುತೂಹಲ, ಮೆಚ್ಚುಗೆ ತೋರಿದರು. 'ಅದು ಸಿಗುವುದೇ?' ಎಂದೂ ಕೇಳಿದರು.

ಈ ಕಾವ್ಯವನ್ನು ಮರುಮುದ್ರಿಸೋಣ ಎಂದು ತೀರ್ಮಾನಿಸಿ ಇದಕ್ಕೆ ಶ್ರೀಮಾನ್ ಜಿ. ವೆಂಕಟಸುಬ್ಬಯ್ಯನವರನ್ನು ಮುನ್ನುಡಿ ಬರೆದುಕೊಡಲು ಕೇಳಿದೆವು. ಶ್ರೀಯುತರು "ಇದರ 3ನೇ ಮುದ್ರಣಕ್ಕೆ ಸುದೀರ್ಘವಾದ ಮುನ್ನುಡಿಯನ್ನು ಬರೆದುಕೊಟ್ಟಿದ್ದು ಅದನ್ನು ಮುದ್ರಕರು ಕಳೆದುಬಿಟ್ಟರು" ಎಂದು ತಿಳಿಸಿದರು. ನಮ್ಮ ಭಾರತೀಯ ವಿದ್ಯಾಭವನ ಕರ್ನಾಟಕ ಕೇಂದ್ರದ ಅಧ್ಯಕ್ಷರಾದ ಶ್ರೀಮಾನ್ ಎನ್. ರಾಮಾನುಜ ಅವರು "ಭವನವು ಇದನ್ನು ಪ್ರಕಟಿಸಬಯಸುವುದಾದರೆ ಸಂತೋಷದಿಂದ ಮಾಡೋಣ" ಎಂದು ಹೇಳಿದರು. "ಸಂಪಾದಕರಾಗಿ, ಈ ಕೆಲಸವನ್ನು ಆಗುಮಾಡಿಕೊಡುವಿರಾ" ಎಂದು ಶ್ರೀಮಾನ್ ಟಿ.ವಿ. ಅವರನ್ನು ಕೇಳಿಕೊಂಡೆವು. ಕೃಪೆಮಾಡಿ ಅವರು ಒಪ್ಪಿದರು

``ಕೃತಿಯ ಕರಡು ಪ್ರತಿಯನ್ನು ನೋಡಿ ಮುದ್ರಣ ದೋಷ ಇಲ್ಲದಂತೆ ಮಾಡಿಕೊಡಬೇಕು'' ಎಂದು ಶ್ರೀಮಾನ್ ಸುಂದರ ರಾಜು ಅವರನ್ನು ಕೇಳಿಕೊಂಡೆ. ತಕ್ಷಣವೇ ಅವರು ಒಪ್ಪಿದರು. ಸ್ವತಃ ಗಮಕಿಗಳು ಮತ್ತು ಲೇಖಕರೂ ಆದ ಶ್ರೀ ಸುಂದರರಾಜು ಅವರು, ಕೃತಿಯನ್ನು ಆಮೂಲಾಗ್ರವಾಗಿ ಓದಿ ಅಕ್ಷರ ಸ್ಖಾಲಿತ್ಯಗಳು ಇಲ್ಲದಂತೆ ತಿದ್ದಿ ಕೊಟ್ಟಿದ್ದಾರೆ. ಇವರೆಲ್ಲರಿಗೂ ಹಾಗೂ ಅಂದು ನನಗೆ ಈ ಕೃತಿಯನ್ನು ನೀಡಿ ಉಪಕರಿಸಿದ ಮೈಸೂರಿನ ಆ ಮಹನೀಯರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಮುಖಪುಟ ವಿನ್ಯಾಸವನ್ನು ಮಾಡಿ ಕೊಟ್ಟ ವಿದ್ಯಾಭವನದ ಕಾರ್ಯಕ್ರಮ ಮತ್ತು ಯೋಜನೆಯ ನಿರ್ದೇಶಕರಾದ ನನ್ನ ಸಹೋದ್ಯೋಗಿ ಶ್ರೀಎಚ್.ಎನ್.ಸುರೇಶ್ ಅವರಿಗೆ ನನ್ನ ಕೃತಜ್ಞತೆಗಳು.

ಎಂದಿನಂತೆ ಸರ್ವವಿಧದಲ್ಲೂ ಸಹಾಯ ಮಾಡಿದ ಮೈಸೂರಿನ 'ವಿಶ್ವಕವಿ ಕುವೆಂಪು ಪ್ರಥಮ ದರ್ಜೆ ಕಾಲೇಜ್' ಅಧ್ಯಾಪಕಿಯಾಗಿ ಕೆಲಸಮಾಡುತ್ತಿರುವ ಶ್ರೀಮತಿ ಸುಮನಾ ವಿಶ್ವನಾಥ್ ಅವರಿಗೆ, ಭವನದ ಸಹೋದ್ಯೋಗಿಯಾಗಿರುವ ಶ್ರೀಮತಿ ಮಂಜುಳಾ ಅವರಿಗೆ ಹಾಗೂ ಈ ಕೃತಿಯನ್ನು ಬಲು ಮುದ್ದಾಗಿ ಮುದ್ರಿಸಿಕೊಟ್ಟಿರುವ ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್ ಮಾಲೀಕರಾದ ಶ್ರೀ ಪಿ.ಎಸ್. ವೆಂಕಟೇಶ ಬಾಬು ಮತ್ತು ಇವರೊಂದಿಗೆ ಕೆಲಸ ಮಾಡುತ್ತಿರುವ ಸಹೋದ್ಯೋಗಿಗಳಿಗೂ ನನ್ನ ಕೃತಜ್ಞತೆಗಳು.

ಕಳೆದ 10-12 ವರ್ಷಗಳಿಂದ ಭಾರತೀಯ ವಿದ್ಯಾಭವನದ ಸಾಹಿತ್ಯ - ಸಂಸ್ಕೃತಿ ಸೇವಾಕಾರ್ಯಗಳಿಗೆ ಸಕಲ ವಿಧದಲ್ಲೂ, ತಮ್ಮ ತಂದೆಯವರ ಹೆಸರಿನಲ್ಲಿ ಧನಸಹಾಯ ಮಾಡಿ ಪ್ರೋತ್ಸಾಹ ನೀಡುತ್ತಿರುವ ಶ್ರೀಮಾನ್ ಪತ್ತಿ ಶ್ರೀಧರ್ ಹಾಗೂ ಅವರ ಧರ್ಮಪತ್ನಿ ಶ್ರೀಮತಿ ಶಾಂತಮ್ಮನವರಿಗೆ ಭವನವು ಚಿರಋಣಿಯಾಗಿದೆ. ಈ ಕೃತಿಯ ಪ್ರಕಟಣೆಗೆ ತಗುಲಿದ ವೆಚ್ಚವನ್ನು

ಥೆಗೆ ಕವಿಯ ಪ್ರತಿಗ ದೊರೆಯುವಂತೆ ಮಾಡಿದ್ದಾರೆ. ಇದೆಲ್ಲವೂ ಭಗವಂತನ, ಆ ವೀರನಾರಾಯಣನ ಕೃಪೆ. ಹೊಸದಾಗಿ ಮುದ್ರಣವಾಗಿರುವ ಈ ಕೃತಿ, ಇದೋ ಈಗ ನಿಮ್ಮ ಮುಂದೆ ಇದೆ. ಇದನ್ನು ನೀವು ಓದಿ ನಿಮ್ಮ ಮನ-ಮನಗಳಲ್ಲಿ ಇರಿಸಿಕೊಳ್ಳುತ್ತೀರೆಂದು ನಂಬಿದ್ದೇನೆ.

ಬೆಂಗಳೂರು
06-05-2011

ಡಾ. ಮತ್ತೂರು ಕೃಷ್ಣಮೂರ್ತಿ
(ಪದ್ಮಶ್ರೀ ಪುರಸ್ಕೃತ)
ನಿರ್ದೇಶಕರು, ಭಾರತೀಯ ವಿದ್ಯಾಭವನ,
ಎಂ.ಪಿ.ಬಿರ್ಲಾ ಫೌಂಡೇಶನ್

# ಅನುಕ್ರಮಣಿಕೆ

# ಕರ್ಣಾಟಕ ಭಗವದ್ಗೀತೆ



## ಭಾಮಿನೀ ಷಟ್ಪದಿ

॥ ಪೀಠಿಕಾ ಸಂಧಿ ॥

ಶ್ರೀಲಲಿತ ಶುಭಗಾತ್ರ ವಿಕಸಿತ
ಲೋಲಸರಸಿಜನೇತ್ರ ವರಮುನಿ
ಜಾಲಸನ್ನುತಿಪಾತ್ರ ಸರ್ವೇಶ್ವರ ಸುಚಾರಿತ್ರಾ ।
ಶೈಲಜಾಪ್ರಿಯನಾಮ ಪೃಥ್ವೀ
ಪಾಲ ವಂಶಲಲಾಮ ರಾಜಿತ
ನೀಲಮೇಘಶ್ಯಾಮ ರಕ್ಷಿಪುದೆನ್ನ ರಘುರಾಮ ॥ ೧

ಬ್ರಹ್ಮನಾಗಿಯೆ ಸಕಲಲೋಕವ
ನಿರ್ಮಿಸುವ ಹರಿಯಾಗಿ ರಕ್ಷಾ
ಕರ್ಮದಿಂ ಪಾಲಿಸುವ ಸಂಹರಿಸುವನು ಹರನಾಗಿ ।
ಕರ್ಮಸಾಕ್ಷಿ ಗುಣತ್ರಯಂಗಳ
ನೆಮ್ಮದೆಲ್ಲವ ಮೀರಿತೋರುವ
ನಮ್ಮ ಪಾಂಡವವರದ ವಿಟ್ಠಲರಾಯ ರಕ್ಷಿಪುದು ॥ ೨

ಪ್ರಾಸುಕೂಡಲಿ ಕೂಡದಿರಲಾ
ದೋಷವೆಲ್ಲವ ತಿದ್ದುವುದು ಸಂ
ತೋಷದಿಂ ಕರ್ಣಾಟಕವಿಗಳು ಶಾಸ್ತ್ರಕೋವಿದರು ।
ವಾಸುದೇವ ಕಥಾಮೃತವ ವಿ
ಶ್ವಾಸದಿಂ ನೆರೆತಿಳಿದು ಸುಖಿಸುವು
ದಾಸೆಯೆಲ್ಲವ ಬಿಟ್ಟು ಮುನಿಗಳು ಹರಿಪರಾಯಣರು ॥ ೩

ಯೋಗಿಕಾಶ್ಯಪಗೋತ್ರ ಸಂಭವ
ನಾಗರುಪಪಿತ್ಸ್ವರನ ಸುತ
ನಾಗರಸ ನಾನೊಮ್ಮೆ ಸದ್ಗುರುವಿಂಗೆ ವಂದಿಸಲು ।
ಆಗ ಶಂಕರಗುರು ನಿರೀಕ್ಷಿಸ
ಲಾಗಿ ಯಾನಂದಾತ್ಮ ಪದದಿಂ
ಬೇಗದಿಂ ನಡಸಿದೆನು ಗೀತಾರ್ಥವನು ಬುಧರೊಲಿಯೆ ॥ ೬

ಪಾದದೊಳು ಹದಿನಾಲ್ಕು ಮಾತ್ರೆಯೊ
ಳಾಮುದೀ ಭಾಮಿನಿಯ ಷಟ್ಪದಿ
ಪಾದದೆರಡನೆಯಕ್ಕರವೆ ತಾಂ ಪ್ರಾಸವೆನಿಸುವುದು ।
ಈಧರೆಯೊಳೀ ಗೀತೆಯರ್ಥವ
ನೈದೆ ಪದಕೊಂದೊಂದು ಗ್ರಂಥವ
ಸಾಧಕರು ತಿಳಿವಂತೆ ಕನ್ನಡದಿಂದ ರಚಿಸಿದೆನು ॥ ೭

ಇಂತು ಪೀಠಿಕಾ ಸಂಧಿ



# ಮೊದಲನೇ ಅಧ್ಯಾಯ - ಅರ್ಜುನ ವಿಷಾದಯೋಗ

ಸೂಚನೆ :-

ಉಭಯ ಬಲಮಧ್ಯದಲಿ ವಿಶ್ವ
ಪ್ರಭು ನಿರೀಕ್ಷಿಸೆ ಪಾರ್ಥ ತಾನತಿ
ರಭಸದಲಿ ಶೋಕಿಸುತ ರಥದೊಳು ಬಿಲ್ಲನಿಳುಹಿದನು ॥

ಪರಮಬ್ರಹ್ಮವೆ ತಾನೆ ಮೊದಲೀ
ಶ್ವರನೆನಿಸಿ ನಿಜಮಾಯೆಯೊಳು ಗೋ
ಚರಿಸಿ ಸಕಲ ಚರಾಚರಂಗಳ ಸೊಲಿದು ವಿಸ್ತರಿಸಿ ।
ಪರಿಪರಿಯ ಗುಣಮೂರ್ತಿಗಳಲವ
ತರಿಸಿ ಭಕ್ತರಕಾವ ಭರದಿಂ
ನರನ ಸಾರಥಿಯಾದ ಕೃಷ್ಣನೆ ಸಲಹು ಮೂಜಗವ ॥ ೧

ಪರಮಧರ್ಮಕ್ಷೇತ್ರವೆನಿಸುವ
ವರಕುರುಕ್ಷೇತ್ರದಲಿ ಘನಸಂ
ಗರವ ಬಯಸುವ ನಮ್ಮವರು ಪಾಂಡವರು ಮೋಹರಿಸಿ ।
ಇರದೆ ಬಳಿಕವರೇನಮಾಡಿದ
ರರಿಯಲೆಲ್ಲವ ಹೇಳುಸಂಜಯ
ನಿರುತದಿಂ ದೆನಗೆಂದನಾಧೃತರಾಷ್ಟ್ರ ಭೂಪಾಲ ॥ ೨

(ಸಂಜಯಂ ಪೇಳನೆಂತೆಂದೊಡೆ)

ಕೇಳುಧೃತರಾಷ್ಟ್ರಾವನಿಪ ಕ
ಟ್ಟಾಳು ದುರ್ಯೋಧನನು ಪಾಂಡವ
ರೇಳಿಗೆಯ ಚತುರಂಗಬಲವನು ನೋಡಿದಾಕ್ಷಣದಿ ।
ಕಾಳಗದ ಮುಖದಲ್ಲಿ ಕುರುಕುಲ ।
ಮೌಳಿ ದ್ರೋಣನ ಪೊರೆಗೆ ಬಂದು ನೃ
ಪಾಲವಂದಿಸಿ ನುಡಿದನೀವಾಕ್ಯವನು ವಿನಯದಲಿ ॥ ೩

ಗುರುವೆ ನಿಮ್ಮಯ ಶಿಷ್ಯನಾಗಿಹ
ಗುರುವ ಬುದ್ಧಿಯನುಳ್ಳ ದ್ರುಪದನ
ವರಕುಮಾರಕನಿಂದ ಮೋಹರಿಸಿರ್ಪ ಪಾಂಡವರಾ ।
ನೆರೆದ ಸೇನೆಯ ನೋಡಿದಿರೆ ರಿಪುಮೋ
ಹರದೊಳಗೆ ಬಲುಗಯ್ಯಳೆನಿಸುವ
ವರಮಹಾರಥರುಗಳ ತೋರುವೆನೆಂದ ನವನೀತ ॥ ೩

ಇಲ್ಲಿ ನೋಡ್ಯೆ ಶೂರರನಿಬರು
ಬಿಲ್ಲಧರಿಸಿ ರಣಾಂಗಣದಿ ರಿಪು
ದಲ್ಲಣರ ಭೀಮಾರ್ಜುನರ ಸಾಹಸಕೆ ಸರಿಯೆನಿಪ ।
ಬಲ್ಲಯುಯುಧಾನನು ವಿರಾಟನು
ಸಲ್ಲಲಿತಸುಮಹಾರಥನು ನಿ
ಮ್ಮಲ್ಲಿ ಗರ್ವಿಸದಾತನೀ ದ್ರುಪದಾಂಕನೋಡೆಂದ ॥ ೪

ಚೇಕಿತಾನನು ಧೃಷ್ಟಕೇತುಗ
ಳಾಕಡೆಯ ಕಾಶೀನೃಪಾಲಕ
ನಾಕೆವಾಳನು ವೀರ ಕುಂತೀಭೋಜ ನುತ್ತಮನು ।
ಬೇಕೆನಿಪ ಪುರುಜಿತುವು ಶೈಬ್ಯನು
ಲೋಕವಿಖ್ಯಾತರುಗಳಿವರೇ
ಕೈಕವೀರರು ಪಾಂಡುಪುತ್ರರ ಬಲದ ನಾಯಕರು ॥ ೫

ಇವಯುಧಾಮನ್ಯುತ್ತಮೌಜಸ
ನಿವಕಣಾ ಸುಕುಮಾರ ವರ್ಗ್ಗದೊ
ಳಿವನ ಮೀರುವರಿಲ್ಲ ಕದನಕೆ ಕಾಲಭೈರವನು ।
ಅವಗೆಡೆಯ ನಭಿಮನ್ಯುವಿವ ಪಾಂ
ಡವಕುಮಾರರು ದ್ರೌಪದೇಯರು
ಬವರದೊಳಗಿವರೆಲ್ಲ ಸುಮಹಾರಥರು ಕೇಳೆಂದ ॥ ೬

ವೀರನಾಪ್ರತಿವಿಂಧ್ಯ ಭೀಮಕು
ಮಾರನಾಶ್ರುತಸೋಮ ನರರೊಳು
ದಾರನಾಶ್ರುತವರ್ಮನ ಕುಲಂಗಾಶತಾಯು ಕಣಾ ।
ಚಾರುಸಹದೇವಂಗೆ ಜನಿಸಿದ
ಧೀರಶ್ರುತಸಾಗರನು ಮಿಗೆಖತಿ
ಯೇರಿ ರಣಕನುವಾದ ರಮಳದ್ರೌಪದೀಸುತರು ॥ ೮

ನಮ್ಮ ಸೇನೆಯೊಳಾರು ಕೆಲಬರು
ಮುಮ್ಮೊನೆಯ ನಾಯಕರವರನೆರೆ
ನಿಮ್ಮ ಚಿತ್ತದೊಳರಿಯಲೋಸುಗ ಸಕಲವೇದದಲಿ ।
ಧರ್ಮ ಶಾಸ್ತ್ರಂಗಳಲಿ ಮುನಿಗಳ
ಸಮ್ಮತದ ವಿಪ್ರೋತ್ತಮನೆನಾ
ನೊಮ್ಮೆ ಬಿನ್ನಹಮಾಡಿ ತೋರುವೆ ನೆಂದನವನೀಶ ॥ ೯

ಗರುಡಿಯಾಚಾರಿಯ ನೀನೀ
ವರಪಿತಾಮಹ ಭೀಷ್ಮಕಾಳೆಗ
ಕುರವಣಿಪಕಲಿಕರ್ಣ ಕೃಪ ರಿಪುಬಲಭಯಂಕರರು ।
ಗರುವನಶ್ವತ್ಥಾಮನಾತನ
ಹೊರೆಯಲಿರುವ ವಿಕರ್ಣ ಕದನಕೆ
ಕರೆವ ಭೂರಿಶ್ರವನು ಮೊದಲಾದ ವರನೋಡೆಂದ ॥ ೧೦

ಮತ್ತೆಹಲಬರು ವೀರರುಗಳ
ತ್ಯುತ್ತಮರು ತನಗೋಸುಗರ ನೆರೆ
ತೆತ್ತಜೀವವನುಳ್ಳವರು ಶಸ್ತ್ರಾಸ್ತ್ರವನು ಪಿಡಿದು ।
ಇತ್ತಲೀಸಮರದಲಿ ರಿಪುಗಳ
ನೆತ್ತಿಹಾಯ್ಕುವ ವೀರಸುಭಟರ
ಮೊತ್ತವಿದೆ ಹೇರಾಳಯುದ್ಧದ ಮಲ್ಲರಿವರುಗಳು ॥ ೧೧

ನಮ್ಮಬಲವೀ ಭೀಷ್ಮನಿಂದವೆ
ಸಮ್ಮತಿಸಿಕೊಂಡಿಹುದು ಕೇಳ್ಳೈ
ಧರ್ಮ ಪುತ್ರನ ಬಲದೊಡನೆ ಸತ್ವದಲಿ ಕಿರಿದಹುದು ।
ಹಮ್ಮಿದಾಬಲ ಭೀಮಸೇನನ
ನೆಮ್ಮುಗೆಯಲಿರುತಿಹುದು ಧುರದಲಿ
ನಮ್ಮ ಬಲದಿಂದಧಿಕವೆಂದನು ಕೌರವರರಾಯ ॥ ೧೨

ನಮ್ಮ ಬಲ ರಿಪುಬಲದ ಮಧ್ಯದ
ಸಮ್ಮುಖದ ಕೆಲಬಲವ ಖಂಡಿಸಿ
ನಿಮ್ಮ ಮಾರ್ಗಂಗಳಲಿ ರಿಪುಗಳ ಸೇನೆ ಪೊಗದಂತೆ ।
ನಿಮ್ಮ ನಿಮ್ಮೈಸರಲಿ ಬಲಿದ
ದ್ದೆಮ್ಮ ಭೀಷ್ಮನ ಕಾದು ಕೊಳುವುದು
ನಿಮ್ಮನಾನುರೆ ಬೇಡಿಕೊಂಡವ ನೆಂದನವನೀಶ । ೧೩

ಧುರವಿಜಯವಿಖ್ಯಾತನೆನಿಸುವ
ಕುರುಪಿತಾಮಹ ಭೀಷ್ಮತಾನತಿ
ಹರುಷದಿಂ ಕುರುಪತಿಗೆ ಸಂತೋಷವನು ಜನಿಯಿಸುತ ।
ಭರದಿ ಸಿಂಹನಿನಾದದಿಂದ
ಬ್ಬರಿಸಿ ಶಂಖಧ್ವಾನವನು ವಿ
ಸ್ತರಿಸಿದನು ರಿಪುಬಲ ಬೆದರಲೆಂಬೆನದ್ಭುತವ ॥ ೧೪

ಬಿಡದನಂತರದಲ್ಲಿ ಶಂಖವು
ಜಡಿವ ಭೇರಿ ಮೃದಂಗ ತಮ್ಮಟ
ಗಿಡಿಬಿಡಿಗಳಬ್ಬರದ ಹಬ್ಬರೆ ಕಹಳನಿಸ್ಸಾಳ ।
ಹೊಡೆಯಲೊಂದೇಬಾರಿ ಬಲದಲಿ
ಸಿಡಿಲವೋಲ್ವ್ಯಾಪ್ತಸ ಗಗನದೊ
ಳೊಡೆದೆನಂಬೆನು ಮಹಾದ್ಭುತವಾಯ್ತು ಕೇಳೆಂದ ॥ ೧೫

ಬಳಿಕ ನೋಡಲು ಬಿಳಿಯತೇಜಿಯ
ಹೊಳಹುಮಿಗೆ ರಥದಲಿ ಮೆರೆದಿಹ
ಲಲಿತ ದಿವ್ಯಾಂಬರದ ಚೆಲುವಿನ ಮಾಧವಾರ್ಜುನರು ।
ಥಳಥಳಿಸುತಿಹದಿವ್ಯಶಂಖಂ
ಗಳನು ಪೂರೈಸಿದರು ಲಕ್ಷ್ಮೀ
ನಿಳಯನೆಸೆದನು ಗರ್ಜಿಸುವ ನವಮೇಘದಂದದಲಿ ॥ ೧೬

ಮೊಳಗಿದನು ಹರಿ ಪಾಂಚಜನ್ಯವ
ಬಳಿಯಮಾಕ್ಷಣ ದೇವದತ್ತವ
ಸೆಳೆದು ಪೂರೈಸಿದನು ಫಲುಗುಣನತಿಭಯಂಕರವ ।
ಬಲುಪರಾಕ್ರಮಿ ಭೀಮನಾ ವೆ
ಗ್ಗಳದ ಪೌಂಡ್ರವನೂದಲಾ ದನಿ
ಕಳನ ತುಂಬಿತು ಕಳವಳಿಸಿತರಿಸೇನೆ ಭೀತಿಯಲಿ ॥ ೧೭

ಅರಸಕುಂತೀದೇವಿಯಾತ್ಮಜ
ಹರುಷ ಮಿಗಲು ಯುಧಿಷ್ಠಿರನು ತಾ
ಭರದಿಭಾರಿಯನಂತ ವಿಜಯವನೂದಲಾಕ್ಷಣದಿ ।
ವರನಕುಲಸಹದೇವರುಗಳು
ಬ್ಬರಿಸಿ ಮಣಿಪುಷ್ಪಕಸುಘೋಷವ
ಪರಿವಿಡಿಯಲೂದಿದರು ಸಮರೋದ್ಯೋಗಪರರಾಗಿ ॥ ೧೮

ಅತಿಬಲನು ಬಲು ಬಿಲ್ಲಹಿಡಿದು
ಸ್ನತನು ಕಾಶ್ಯನು ವೀರಭೀಷ್ಮನ
ಹತಿಗೆ ಕಾರಣನಹ ಶಿಖಂಡಿ ಯುಧಿಷ್ಠಿರನ ದಳಕೆ ।
ಪತಿಯೆನಿಪ ದ್ರುಪದಾತ್ಮಜನುಭೂ
ಪತಿ ವಿರಾಟನು ವೀರಸಾತ್ಯಕಿ
ಧೃತಿಮಿಗಲು ಶಂಖಗಳ ಪೂರೈಸಿದರು ಸಮರದಲಿ ॥ ೧೯

ಧೀರನಾ ಪಾಂಚಾಲದೇಶದು
ದಾರದ್ರುಪದನು ದ್ರೌಪದಿಯ ಸುಕು
ಮಾರದ್ರೈವರು ಪಾರ್ಥನಂದನನಧಿಕನಭಿಮನ್ಯು ।
ವೀರರುಗಳಿವರೆಲ್ಲಶಂಖವ
ಪೂರಯಿಸಿ ತಮತಮಗೆ ಬೊಬ್ಬಿರಿ
ದಾರಿ ಸಮರವ ಹಾರಿದರು ಧೃತರಾಷ್ಟ್ರಕೇಳೆಂದ ॥ ೨೦

ಆ ಮಹಾಧ್ವನಿ ಗಗನತಳವನು
ಭೂಮಿಯನು ತುಂಬುತ ಛಡಾಳಿಸೆ
ತಾಮಸಾಂಧರ ನಿನ್ನ ಸುತರ ಸುಯೋಧನಾದಿಗಳ ।
ಕೋಮಲದ ಹೃದಯಂಗಳನು ನಿ
ಸ್ಸೀಮ ಬಹಳ ನಿನಾದವೊಡೆದುದು
ಹಾ ಮಹಾದೇವಯೆನುತ ಬೆದರಿತು ನೃಪವ್ರಾತ ॥ ೨೧

ಅದರ ನಂತರದಲ್ಲಿ ಪಾರ್ಥನು
ಇದಿರಲಿಹ ಧೃತರಾಷ್ಟ್ರಸುತರನು
ಕದನಕುದ್ಯೋಗಿಸುವರನು ನೆರೆಕಂಡು ತಾ ಬಳಿಕ ।
ಅದುಭುತದ ಕೈದುಗಳು ಕವಿಯಲು
ಮುದದಲರ್ಜುನ ಬಿಲ್ಲನೇರಿಸಿ
ಬೆದರಿಸಿದನಂವಾಕಪಿಧ್ವಜವೈರಿಮೋಹರವ ॥ ೨೨

ಅರಸ ಚಿತ್ತೈಸಿಂದ್ರಿಯಂಗಳಿ
ಗರಸೆನಿಸುತಿಹ ಹರಿಯೊಡನೆ ನರ
ಹರುಷದಿಂದೀಮಾತನುಡಿದನು ಸಮರಕೋಸುಗರ ।
ನೆರೆದುಭಯಬಲ ಮಧ್ಯದಲಿಯೆ
ಮ್ಮುರವಣಿಪ ವರರಥವನಚ್ಯುತ
ಭರವಶದಿ ನಿಲಿಸೆಂದು ಬಿನ್ನಹ ಮಾಡಿದನು ನಗುತ ॥ ೨೩

ಆರು ಕೆಲರೆನ್ನಿಂದ ಕದನವ
ಹಾರಿಬಂದವರೊಡನೆ ನಾನೀ
ಸಾರತರವಹ ಸಮರದುದ್ಯೋಗದಲಿ ಮುದದಿಂದ ।
ಆರೊಡನೆಕಾದುವೆನು ಎಂಬೀ
ಕಾರಿಯವ ನಿಶ್ಚಯಿಸುವನಕಂ
ಶೌರಿತನ್ನಯ ವರರಥವ ನಿಲಿಸೆಂದನಾ ಪಾರ್ಥ ॥ ೨೪

ಇಲ್ಲಿ ಕದನಕ್ಕೋಸುಗರತಾ
ನಿಲ್ಲದೊದಗಿಹರಾರು ಕೆಲಬರು
ಖುಲ್ಲ ಧೃತರಾಷ್ಟ್ರನ ಕುಮಾರನ ಮನಕತಿಪ್ರಿಯವ ।
ನಿಲ್ಲದೆಲ್ಲವ ಮಾಡಿತೋರಲು
ಬಲ್ಲೆವೆಂಬೀ ವೈರಿನೃಪರುಗ
ಳೆಲ್ಲರನು ತಾ ನೋಡುವನಕೀರಥವನಿಲಿಸೆಂದ ॥ ೨೫

ಈ ಪರಿಯಲಿ ಸುಷುಪ್ತಿಯನು ಗೆಲಿ
ದಾಪರಂತಪ ಪಾರ್ಥನಿಂ ನಿಜ
ರೂಪನಹ ಸಕಲೇಂದ್ರಿಯಾಧಿಪ ಕೃಷ್ಣನೆರೆಕೇಳ್ದು ।
ಆಪರಿಯಲುತ್ತಮ ರಥವನೆಲೆ
ಭೂಪ ಕೇಳೈ ಉಭಯಬಲ ಮಿಗೆ
ತಾಪಿಸಲು ಮಧ್ಯದಲಿ ನಿಲಿಸಿದನಮರರಾಯೆನಲು ॥ ೨೬

ಧುರಕೆ ಬಂದಿಹ ಕುರುಕುಲಾನ್ವಯ
ಗುರುಪಿತಾಮಹ ಕೃಪನು ಮೊದಲಾ
ದರಸುಗಳ ಮಧ್ಯದಲಿ ಸಮರೋದ್ಯೋಗಪರರಾಗಿ ।
ದುರುಳರಹ ಕೌರವರನೀಕ್ಷಿಸು
ನರನೆ ಚಾತುರ್ಬಲ ಸಮುದ್ರದ
ತೆರಳಿಕೆಗೆ ಬಡಬಾನಲನು ನೀನೆಂದನಸುರಾರಿ ॥ ೨೭

ಅಲ್ಲಿ ನೋಡಿದ ನಿಂದು ಚೌಪಟು
ಮಲ್ಲಪಾರ್ಥನು ಪಿತೃಪಿತಾಮಹ
ರೆಲ್ಲರನು ಆಚಾರ್ಯ ಸೋದರ ಮಾವ ಮೈದುನರ ।
ಬಲ್ಲಿ ದೊಡಹುಟ್ಟಿದರ ಪುತ್ರರ
ಸಲ್ಲಲಿತರಾಗಿರುವ ಪೌತ್ರರ
ಕೊಲ್ಲಲೆನಗುಚಿತವೆ ಮಹಾದೇವೆಂದ ನಾಪಾರ್ಥ ॥ ೨೮

ಮತ್ತೆಮಾವಂದಿರನು ಸುಜನಸು
ಹೃತ್ತುಗಳನೀ ಉಭಯ ಸೇನೆಯೊ
ಳುತ್ತಮರ ನೆರೆಕೊಂದು ಮಾಡುವುದೇನು ನಮಗೀಗ ।
ಇತ್ತಲೀ ಬಲದೊಳಗೆ ಬಂದುರೆ
ಮೊತ್ತವಾಗಿಹ ಬಂಧುಗಳಕಾ
ಣುತ್ತ ಹೇಸದೆ ಕೊಲುವ ನಾನಲ್ಲೆಂದನಾಪಾರ್ಥ ॥ ೨೯

ಪರಕೃಪಾಕರನಾಗಿ ಪಾರ್ಥನು
ಹಿರಿದು ಶೋಕವ ತಾಳುತಾಕ್ಷಣ
ಹರಿಯ ಕೂಡೀಮಾತ ಬಿನ್ನವಿಸಿದನು ಕೈಮುಗಿದು ।
ಮುರಹರನೆ ಚಿತ್ತೈಸು ಕದನಕೆ
ಭರವಸದ ಲೈತಂದ ನೆಂಟರ
ನೆರವಿಯನು ಕಯ್ಯಾರೆ ಕೊಲುವವನಲ್ಲನಾನೆಂದ ॥ ೩೦

ಬಳಲುತಿವೆ ಯೆನ್ನವಯವಂಗಳು
ಕಳವಳದಿ ಬಾಯೊಣಗುತಿದೆ ಮುಖ
ಬಳಲುತಿದೆ ನಡನಡುಗುತಿದೆ ಮಸ್ತಕ ವಿಕಾರದಲಿ ।
ತಿಳಿಯೆ ತನುರೋಮಾಂಚವಲಿ ನೆರೆ
ದುಳುಗುತಿದೆ ಶಿವಶಿವ ಮಹಾದೇ
ವೆಲೆ ಹರಿಯೆ ಕೃಪೆಮಾಡು ಕೃಪೆಮಾಡೆಂದನಾಪಾರ್ಥ ॥ ೩೧

ಕರತಲದೆ ಜಾರುತ್ತಲಿದೆ ಯೀ
ವರಮಹಾ ಗಾಂಡೀವ ಕವಚವು
ನೆರೆಯುರಿದು ಕೌರೇಳುತಿದೆ ಮನ ಮರುಗಿ ಭ್ರಮಿಸುತಿದೆ ।
ತರಹರಿಸಿ ನಿಲಲಾರೆ ನೆನ್ನಯ
ಕರಣ ಪಲ್ಲಟವಾಗುತಿದೆ ಮುರ
ಹರನೆ ಕರುಣಿಸು ಕರುಣಿಸೆಂದನು ಪಾರ್ಥ ಕೈಮುಗಿದು ॥ ೩೨

ಕಂಡೆನಾ ದುಸ್ಸ್ವಪ್ನವನು ಮುಂ
ಕೊಂಡು ತೋರ್ಪವ ಶಕುನಹಲವರ
ತಂಡವನು ಬಿಡದೀಕ್ಷಿಸುತಲಿವೆ ಕಣ್ಗಳಿದಿರಿನಲಿ ।
ಕಂಡು ಕಂಡೀಸಮರದೊಳಗು
ದ್ದಂಡತನದಲಿ ಬಂಧುಗಳನೆರೆ
ದಿಂಡುದರಿದಪ ಲೇಸ ಕಾಣೆನು ದೇವ ಕೇಳೆಂದ ॥ ೩೩

ಘಾಸಿಯಾದೆನು ರಿಪುಗಳನು ಗೆಲು
ವಾಸೆ ತಾನೆನಗಿಲ್ಲ ರಾಜ್ಯವ
ನಾಸುಖಂಗಳ ಬಯಸುವವನಾನಲ್ಲಗೋವಿಂದ ।
ಕ್ಲೇಶದಿಂದಪಕೀರ್ತಿಯಿಂಬಹ
ದೇಶದಿಂ ಭೋಗಂಗಳಿಂ ನಾ
ಮೇಸುದಿನ ಜೀವಿಸಲುಮಾವುದು ಫಲವು ಹೇಳೆಂದ । ೩೪

ಆರಿಗೋಸುಗ ನಾವು ರಾಜ್ಯದ
ಸಾರತರಭೋಗಂಗಳನು ವಿ
ಸ್ತಾರಚಾರುಸುಖಂಗಳನು ಬಯಸುತ್ತಲಿರುತಿಹೆವು ।
ಈರಣದಲವರೆಲ್ಲ ತಮ್ಮನು
ಸೇರಿರುವ ಪ್ರಾಣಂಗಳನು ಧನ
ಭಾರವನು ಬಿಟ್ಟೈದೆ ಬಂದರು ದೇವ ನೋಡೆಂದ ॥ ೩೫

ವರಪಿತೃಗಳು ಪಿತಾಮಹರುಗಳು
ನಿರುತ ಸೋದರಮಾವ ಮಾವಂ
ದಿರುಗಳಾಚಾರಿಯರು ಪೌತ್ರರು ಭಾವಮೈದುನರು ।
ಪರಮಬಾಂಧವರುಗಳು ಕದನಕೆ
ನೆರೆದು ಬಂದಿರುತಿಹರು ಮುರಹರ
ಕರುಣಿಸೈ ಕಾರುಣ್ಯನಿಧಿ ನೀನೆಂದನಾಪಾರ್ಥ ॥ ೩೬

ಇವರು ನೆರೆನೆರೆದೆನ್ನ ಶಸ್ತ್ರದ
ಲವಗಡಿಸಿ ಬಿಡದಿರಿದಡೆಯು ಮೇ
ಣಿವರಸಿರಿ ಮೂಲೋಕದೊಡೆತನವೆನೆಗೆ ಸಾರ್ದಡೆಯು ।
ಅವಗಡೆಯತನದಿಂದ ಬಹಜಡ
ಭುವನದೊಡೆತನಕೋಸುಗರ ನಾ
ನಿವರನೆಂತೈ ಕೊಲುವೆನೆಲೆ ಮುರಮಥನ ಹೇಳೆಂದ ॥ ೩೭

ಆವಸುಖ ಬಹುದೆಮಗೆ ಕುರುವಂ
ಶಾವಳಿಯ ಧೃತರಾಷ್ಟ್ರಪುತ್ರರ
ನಾವು ಕೊಂದುದರಿಂದ ನೆರೆ ನಮಗಾವಲೇಸಹುದು ।
ಈವಿಕರ್ಮದ ದುಷ್ಟರಿವದಿರ
ಹೇವವಿಲ್ಲದೆ ಕೊಂದೆನಾದರೆ
ದೇವಕೇಳೈ ಪಾಪವೇ ಬಹುದೆಂದನಾ ಪಾರ್ಥ ॥ ೩೮

ಬಂಧುಗಳ ನೆರೆಕೊಂದು ಮುದದಿಂ
ಸಂದಸೌಖ್ಯವನಾವ ಪರಿಯಲಿ
ಕುಂದದೈದುವ ಛಂದವಿಲ್ಲಾ ಗದುನಿಮಿತ್ತದಲಿ ।
ಇಂದಖಿಳ ಬಾಂಧವರು ವೆರಸಿಹ
ತಂದೆ ಧೃತರಾಷ್ಟ್ರನ ಕುಮಾರರ
ಮಂದಮತಿಗಳ ಕೊಲೆಗೆ ಪ್ರಾಪ್ತರೆ ನಾವು ಹೇಳೆಂದ ೩೯

ಎಲೆಜನಾರ್ದನ ರಾಜ್ಯಲೋಭದ
ಬಲುಹಿನಿಂ ನೆರೆಕೆಟ್ಟ ಚಿತ್ತದ
ಛಲದಲಿಹ ಧೃತರಾಷ್ಟ್ರಸುತರೀಕುಲದ ಬಾಂಧವರು ।
ಹಲವು ಮಿತ್ರದ್ರೋಹದಿಂ ಬಹ
ಕೊಲೆಯ ಪಾಪವನರಿಯರಿವದಿರು
ಸಲೆ ಸಮರಕೈತಂದರೆಯು ನಾವಂಜಬೇಕೆಂದ ॥ ೪೦

ಕುಲದ ಕೇಡಿನ ದೋಷವನು ನಿ
ಶ್ಚಲದ ಮಿತ್ರದ್ರೋಹವನು ನಿ
ರ್ಮಲದ ಶಾಸ್ತ್ರಂಗಳನು ನಾನೀನಿಮ್ಮದೆಸೆಯಿಂದ ।
ತಿಳಿಯೆ ಕೇಳ್ದಾಪಾಪದಿಂ ಮಿಗೆ
ತೊಲಗದಿಹುದೆನಗುಚಿತವೇ ಹೇ
ಳೆಲೆ ಜನಾರ್ದನ ಎಂದನಾಫಲುಗುಣನು ಶೋಕಿಸುತ ॥ ೪೧

ಕುಲಕೆಡಲು ಪಾರಂಪರೆಗಳಿಂ
ಚಲಿಸದಿಹ ಕುಲಧರ್ಮ ಕೆಡುವುದು
ಕುಲದ ಪಾರಂಪರೆಯ ಧರ್ಮವು ಕೆಡಲಿಕಾಕುಲಕೆ ।
ಹಲವು ಧರ್ಮಂಗಳು ನೆರೆದು ತ
ತ್ಕುಲವನೆಲ್ಲವ ಕೆಡಿಸಿ ಕಳೆವುದು
ಕುಲಕೆಡುವ ಪರಿ ಯೆಂತೆನಲು ಕೇಳೆಂದನಾ ಪಾರ್ಥ ॥ ೪೨

ಸಲೆಯಧರ್ಮವು ಜನಿಸುವುದರಿಂ
ಲಲನೆಯರು ವ್ಯಭಿಚರಿಸುವರು ತ
ಚ್ಚಲನದಿಂದುರೆ ವರ್ಣಸಂಕರ ಜನಿಸುವುದು ಬಳಿಕ ।
ಹಲವು ಮಾತೇನೈ ಜನಾರ್ದನ
ನೆಲೆಯ ನೀನೇ ಬಲ್ಲೆನಿರ್ಮಲ
ಕುಲದಕೇಡಿಹಪರಕೆ ಲೇಸೇನೆಂದನಾಪಾರ್ಥ ॥ ೪೩

ಜಾತಿಸಂಕರ ಕುಲವ ಕೆಡಿಸಿದ
ಪಾತಕಿಗೆಯುಂ ಕುಲಕೆಯುಂ ಕಡು
ಘಾತವಾದಕ್ಷಯದ ನರಕಕೆ ಮೂಲವಾಗಿಹುದು ।
ಆತಗಳ ಪಿತೃಮಾತೃಗಳು ತ
ಚ್ಯುತ ಪಿಂಡಾಂಜಲಿಗಳಿಲ್ಲದೆ
ಭೀತಿಪಡಿಸುವ ನರಕದಲಿ ಬೀಳುವರು ಕೇಳೆಂದ ॥ ೪೪

ಜಾತಿಧರ್ಮಗಳೆಲ್ಲ ಕೇಳು ಸ
ನಾತನದ ಲೈತಂದುವಿವು ಕುಲ
ಘಾತುಕನದೆಸೆಯಿಂದ ಜನಿಸಿದ ವರ್ಣಸಂಕರದಿ ।
ತಾ ತಳುವದನವರತ ಮಾಡುವ
ಪಾತಕಂಗಳ ಹೊಯಿಲಿನಿಂ ಮಿಗೆ
ಬೀತುಹೋದುವು ಕುಲದಮಹಿಮೆಗಳೆಂದನಾಪಾರ್ಥ ॥ ೪೫

ಎಲೆಜನಾರ್ದನ ಚಿತ್ತವಿಸು ಸ
ತ್ಕುಲದ ಪಾರಂಪರೆವಿಡಿದು ಸಂ
ಚಲಿಸದಿಹ ಧರ್ಮವನು ಮಿಗೆವರ್ಜಿಸಿದ ಮಾನವಗೆ ।
ಹಲವು ನರಕಂಗಳಲಿ ತೊಳಲುವ
ಹಲವು ಕಲ್ಪಂಗಳ ನಿವಾಸದ
ನೆಲೆಯಹುದು ನಾಕೇಳಿಬಲ್ಲೆನು ಧರ್ಮಶಾಸ್ತ್ರದಲಿ ॥ ೪೬

ಹರಹರಾ ನಾವಂಗವಿಸಿದೆವು
ಹಿರಿದು ಪಾಪವಮಾಡಲಿಕೆ ನಿ
ಷ್ಠುರದಲಾ ಮುರಹರನೆ ಕೇಳೀರಾಜ್ಯಸಂಪದವ ।
ಹಿರಿಯ ಸುಖಲೋಭದಲಿ ಬಂದುರೆ
ನೆರೆದಖಿಲ ಬಾಂಧವರುಗಳ ಸಂ
ಗರದೊಳಗೆ ಮಡುಹಲ್ಕೆ ಬಿಡದುದ್ಯೋಗಿಸಿದೆವೆಂದ ॥ ೪೭

ಶರಧನುಗಳನು ಹಾಯ್ಕಿದೆನ್ನನು
ಕೆರಳಿದೀಧೃತರಾಷ್ಟ್ರಸೂನುಗ
ಳಿರದೆ ಶಸ್ತ್ರಾಸ್ತ್ರಂಗಳಿಂದಿರಿಯಲ್ಕೆ ನಾನದನು ।
ಪರಿಹರಿಸಿಕೊಳೆದಿದುವೆ ಸುಖವೆಂ
ದರಿತೆನಾದರೆ ಕೇಳು ತನ್ನಿಂ
ಪಿರಿದು ಸುಕೃತಿಗಳಾರು ಧರೆಯೊಳಗೆಂದನಾಪಾರ್ಥ ॥ ೪೮

ಅವಧರಿಸು ಧೃತರಾಷ್ಟ್ರನರನಾ
ಹವದೊಳೀಪರಿನುಡಿದು ಶರಚಾ
ಪವನಿಳುಹಿ ಕಡುಶೋಕದಿಂ ನೆರೆ ನೊಂದು ಚಿತ್ತದಲಿ ।
ಶಿವ ಎನುತ ರಥದೊಳಗೆ ಮಂಡಿಸ
ಲವನನತಿಕೃಪೆಯಿಂದಲಾಮಾ
ಧವ ನಿರೀಕ್ಷಿಸಿ ತಿಳುಹಬೇಕೆಂದೆನುತ ಮನದಂದ ॥ ೪೯

ಇಂತು ಕೃಷ್ಣಾರ್ಜುನ ಸಂವಾದದೊಳ್

ಅರ್ಜುನವಿಷಾದಯೋಗವೆಂಬ

ಮೊದಲನೇ ಅಧ್ಯಾಯ

ಸಂಪೂರ್ಣ



## ಎರಡನೇ ಅಧ್ಯಾಯ - ಸಾಂಖ್ಯ ಯೋಗ

ಸೂಚನೆ ॥ ಧನುವ ಬಿಟ್ಟರ್ಜುನನಿರಲು ಹರಿ
ವಿನಯದಿಂ ವರ ಸಾಂಖ್ಯಯೋಗವ
ಮನವೊಲಿದು ನಿಜಯೋಗಬುದ್ಧಿಯನಂದು ಬೋಧಿಸಿದ ॥

ಚಿತ್ತವಿಸು ಧೃತರಾಷ್ಟ್ರಮಧುರಿಪು
ಮತ್ತೆ ಕೃಪೆಯಿಂ ಕಂಬನಿಯ ತುಂ
ಬುತ್ತಲತಿನಿರ್ವಿಣ್ಣನಾಗಿಹ ನರನನೀಕ್ಷಿಸುತ ।
ತತ್ವಬೋಧೆಯನರುಹಬೇಕೆಂ
ದುತ್ತಮದ ವಾಕ್ಯವನು ನುಡಿದನು
ತೆತ್ತಿಗನು ತಾನಾಗಿ ಭಕ್ತನ ಕಾವಭರದಿಂದ ॥ ೧

ಎಲೆಧನಂಜಯ ಖಳರ ನೀತಿಯ
ಬಲುಹಿಡಿದು ನೆರೆನೋಡಿ ನುಡಿವುದು
ಹಳಿವುಕೀರ್ತಿಯ ತಹುದು ಪರಲೋಕವನು ಕೆಡಿಸುವುದು ।
ಬಲಿದಶೋಕದ ಮೂರ್ಛೆ ರಿಪುಗಳ
ಕಲಹದವಸರದಲ್ಲಿ ನಿನ್ನನು
ತೊಲಗದೆಲ್ಲಿಂದೈದಿತ್ತೈ ಹೇಳೆಂದನಸುರಾರಿ ॥ ೨

ಅರಿಭಯಂಕರ ನೀನಪುಂಸಕ
ರಿರವನೈದಲುಬೇಡ ನಿನಗಿದು
ಹೊರಕಬಾಗದು ಧೀರತನಕಿದು ಹಾನಿಕರವಹುದು ।
ಮರುಳೆ ಬಡಮನದಿಂದ ಹೆದರದೆ
ಮರಳುತನವನು ಬಿಟ್ಟು ಕದನಕೆ
ಭರವಸದಲೇಳೆನಲು ಕೃಷ್ಣಗೆ ಪಾರ್ಥನಿಂತೆಂದ ॥ ೩

ಚಿತ್ತವಿಸು ಮಧುವೈರಿ ನಿರ್ಮಳ
ಚಿತ್ತದಿಂ ಪೂಜಿಸಿಕೊಳಲ್ಕ
ತ್ಯುತ್ತಮರ ಕಲಿಭೀಷ್ಮದ್ರೋಣ ಕೃಪಾದಿಗುರುಗಳನು ।
ಹೊತ್ತಕೂರಂಬುಗಳಲೆಂತೈ
ಕತ್ತರಿಸುವೆನು ನಿಮ್ಮಡಿಗೆ ನಾ
ಬಿತ್ತರಿಸಲಂಜುವೆನು ವಿಶ್ವಂಭರನೆ ಕೇಳೆಂದ ॥ ೪

ಹಿರಿಯರನು ಗುರುಗಳನು ಕೊಲ್ಲದೆ
ತಿರಿದುಣುವುದೇ ಲೇಸು ಜಗದಲಿ
ಗುರುಗಳನು ನೆರೆಕೊಂದವರ ರಕ್ತಂಗಳಿಂ ನೆನೆದ ।
ಪರಕೆ ಸಲದ ಅನರ್ಥ ಕಾಮದ
ಪಿರಿದು ಭೋಗಂಗಳನು ಭೋಗಿಸಿ
ನರಕದಲಿ ಬೀಳುವೆನದೆಂತೈ ದೇವ ಹೇಳೆಂದ ॥ ೫

ಕದನಮುಖದೊಳಗವರು ನಮ್ಮನು
ಸದೆವರೋ ಮೇಣವರ ನಾವೇ
ಸದೆವೆವೋ ಉಭಯರೊಳು ಜಯಸಿರಿ ಯಾರ ಸೇರುವಳೋ ।
ಅದರಿನಿಂನಾನಾರ ಕೆಲಬರ
ವಧಿಸಿಬದುಕನು ಬಯಸೆನವರುಗ
ಳಿದಿರಲೈದಿದೆ ನೋಡು ಧೃತರಾಷ್ಟ್ರನ ಕುಮಾರಕರ ॥ ೬

ಕಕ್ಕುಲಿತೆಯಿಂ ಕೆಟ್ಟ ಚಿತ್ತದಿ
ಸೊಕ್ಕಿ ಧರ್ಮದ ನೆಲೆಯ ಕಾಣದ
ಚಿಕ್ಕವನು ನಾನಿಮ್ಮ ಕೇಳುವ ಲೇಸದಾವುದನು ।
ಸಿಕ್ಕರಿಯೆ ಪೇಳೆನಗೆ ನೀ ಹಿಂ
ದಿಕ್ಕಿಕೋ ಮರೆವೊಕ್ಕನೆನ್ನನು
ಮಕ್ಕಳೋಪಾದಿಯಲಿ ರಕ್ಷಿಸಿಕಾಯಬೇಕೆಂದ ॥ ೭

ಹಗೆಗಳಿಲ್ಲದ ಭೂತಳದ ಹೆ
ಚ್ಚುಗೆಯರಸುತನವಾದಡೆಯು ಸುರ
ನಗರಿಯೊಡೆತನವಾದಡೆಯು ಕರಣೇಂದ್ರಿಯಂಗಳನು ।
ಮಿಗೆಯೊಣಗಿಸುವ ಶೋಕವುಂಟದ
ತೆಗೆವುಪಾಯವ ಕಾಣೆನೈ ವರ
ನಿಗಮತತ್ತ್ವಾರ್ಥವನು ಮುರಹರ ಕರುಣಿಸೆನಗೆಂದ ॥ ೮

ಕೇಳು ಧೃತರಾಷ್ಟ್ರಾವನಿಪ ಕ
ಟ್ಟಾಳು ಫಲುಗುಣನೀಹದನ ಗೋ
ಪಾಲಕೃಷ್ಣನ ನೋಡಿ ತಾ ಕೈಮುಗಿದು ಬಿನ್ನವಿಸಿ ।
ಕಾಳಗವನಾನೊಲ್ಲೆ ದೇವ ಕೃ
ಪಾಳು ನೀನೇ ಬಲ್ಲೆಯೆನುತ ಛ
ಡಾಳಿಸುವ ಶೋಕದಲಿ ಮೌನದೊಳಿರ್ದನಾಪಾರ್ಥ ॥ ೯

ಅವಧರಿಸು ಧೃತರಾಷ್ಟ್ರವರಕೇ
ಶವನುಭಯಬಲಮಧ್ಯದಲಿ ಶೋ
ಕವನು ತಾಳುತ ಮುಂದುಗೆಡುತಿಹ ಪಾರ್ಥನನು ನೋಡಿ ।
ಇವನ ಬೋಧಿಸಬೇಕೆನುತಲಾ
ಭುವನಪಾವನಮೂರ್ತಿಯದುಕುಲ
ಭವನು ಬಳಿಕೀ ಮಾತ ನುಡಿದನು ಪರಮತತ್ತ್ವವನು ॥ ೧೦

ಎಲೆಧನಂಜಯ ಕೇಳು ಶೋಕಕೆ
ಕೊಲೆಗರುಹರಲ್ಲದ ನಿಜಾನ್ವಯ
ತಿಲಕ ಭೀಷ್ಮದ್ರೋಣ ಮೊದಲಾದವರ ನೀಕುರಿತು ।
ಅಳಲುತಿಹೆ ಬಲ್ಲವರವೊಲು ನೀ
ಹಲವ ವಾದಿಸುತಿಹೆ ಮೃತರಿಗಂ
ಜೀವಿಪರಿಗಂ ತತ್ತ್ವವಿದರಳರೆಂದನಸುರಾರಿ ॥ ೧೧

ಹಿಂದೆ ನಾನನವರತ ಕೇಳ್ಳೆ
ಕುಂದದಿಹೆನಿಲ್ಲೆಂಬುದಿಲ್ಲ್ರೈ
ಇಂದು ನೀ ನಿಲ್ಲೆಂಬುದಿಲ್ಲೈ ಈಜನಾಧಿಪರು ।
ಕುಂದದಿಹರಿಲ್ಲೆಂಬುದಿಲ್ಲಾ
ಸಂದದಿಂ ನಾವೆಲ್ಲರಿಲ್ಲಿಂ
ಮುಂದಿಹೆವು ಇಲ್ಲೆಂಬುದಿಲ್ಲೆಲೆಪಾರ್ಥ ಕೇಳೆಂದ ॥ ೧೨

ತನುವನಭಿಮಾನಿಸಿದವಂಗೀ
ತನುವಿನಲಿ ಕೌಮಾರ ಯೌವನ
ದಿನದನಂತರ ಜರೆಗಳೆಂಬಿವನನುಭವಿಸುವಂತೆ ॥
ತನುವಿದನು ಬಿಟ್ಟನ್ಯದೇಹವ
ನನುಕರಿಸಿ ತಾನಿರ್ದಡದರಲಿ
ವಿನುತಧೀರನು ಮುಂದುಗೆಡನೆಲೆಪಾರ್ಥ ಕೇಳೆಂದ ॥ ೧೩

ಎಲೆಧನಂಜಯ ಇಂದ್ರಿಯಂಗಳು
ಹಲವು ವಿಷಯಂಗಳನು ಸೋಂಕಲು
ಫಲವದಕೆ ಶೀತೋಷ್ಣಸುಖದುಃಖವನು ಕೊಡುತಿಹುವು ।
ಚಲಿಸಿ ಹೋಗುತ ಬರುತಿಹುವು ತಾ
ವೆಲಗೆಕೆಡುವವನಿತ್ಯಗಳು ನೀ
ನೊಲವಿನಿಂದವ ಸೈರಿಸೆಂದನು ದಾನವಧ್ವಂಸಿ ॥ ೧೪

ಆವುದೊಂದುನಿಮಿತ್ತವೀವಿಷ
ಯಾವಳಿಗಳಿಂದ್ರಿಯದ ಸೋಂಕುಗ
ಳೀವ ಸುಖದುಃಖಗಳಲಿ ಸಮವಾದ ಪುರುಷನನು ।
ನೋವನೈದಿಸದಿಪ್ಪವಾತನೆ
ಜೀವರೊಳಗುತ್ತಮನೆನಿಸುವನು
ಪಾವನದ ಮೋಕ್ಷಕ್ಕೆ ಯೋಗ್ಯನು ಪಾರ್ಥ ಕೇಳೆಂದ ॥ ೧೫

ಆವ ಪರಿಯಿಂದಿಲ್ಲದಿಹುದಕೆ
ಭಾವವುಂಟಹುದಿಲ್ಲವುಂಟಹ
ಪಾವನಕೆ ನಿಜಭಾವವಿಲ್ಲದೆಯಿಹುದು ತಾನಿಲ್ಲ ।
ಈವುಭಯವನು ಬ್ರಹ್ಮವಿದರಿಂ
ದಾವು ತಿಳಿಯಲು ಬೇಕದಾದಡೆ
ನೀವಿಮಲಮತಿಯಿಂದ ತಿಳಿಯೆಲೆಪಾರ್ಥ ಕೇಳೆಂದ ॥ ೧೬

ಈಸಮಸ್ತ ಚರಾಚರಂಗಳು
ವೋಸರಿಸವಾವುದರದೆಸೆಯಿಂ
ಲೇಸೆನಿಸಿ ನಿರ್ಮಿಸಲುಪಟ್ಟಿಹ ವಾಸ್ತವರೂಪಿಂಗೆ ।
ವಾಸವಾದಿ ಸಮಸ್ತಭುವನ ನಿ
ವಾಸಿಗಳು ಮೊದಲಾಗಿ ನಿತ್ಯವಿ
ನಾಶರಹಿತಾತ್ಮಂಗೆ ಕೇಡನು ಮಾಳ್ಪರಿಲ್ಲೆಂದ ॥ ೧೭

ಕೆಡದ ಸುಸ್ಥಿರನಪ್ರಮೇಯಂ
ಗೊಡಲಹಂಕಾರದಲಿ ಜೀವದ
ಜಡರಿನಿಂದಲಿ ದೇಹಿಯೆನಿಸುತಲಿಹ ಚಿದಾತ್ಮಂಗೆ ।
ಕೆಡುವ ದೇಹಾದಿಗಳ ಧರ್ಮದ
ಗಡಣವಾತಂಗಿಲ್ಲವೆಂದೇ
ನುಡಿವರಿದುಕಾರಣ ಸಮರಕನುವಾಗು ನೀನೆಂದ ॥ ೧೮

ಆವನೊಬ್ಬನು ತನುವಿನೊಳಗಿಹ
ಜೀವವನು ಕೊಲುವಾತನೆಂಬವ
ನಾವನೊಬ್ಬನು ಕೊಲಿಸಿಕೊಂಬವ ತಾನೆಯೆಂಬವನು ।
ಭಾವಿಸಲಿಕಿವರಿಬ್ಬರುಂ ದಿಟ
ತಾವರಿಯರೈ ಕೊಲಿಸಿಕೊಂಬಸ್ವ
ಭಾವದವತಾನಲ್ಲ ಕೊಲುವವನಲ್ಲ ತಾನೆಂದ ॥ ೧೯

ಈಪರಾತುಮನಜನು ನಿತ್ಯನು
ರೂಪಿನಿಂಶಾಶ್ವತ ಸನಾತನ
ರೂಪನಾಗುದಯಿಸನು ಸಾಯನು ಸರ್ವಕಾಲದಲಿ ।
ಆಪರಮ ಹಿಂದಿಲ್ಲದಿರ ಚಿ
ದ್ರೂಪ ಮುಂದಿನ್ನಿಲ್ಲದವನ
ಲ್ಲಾಪುರುಷನೀತನುವ ಕೊಂದಡೆ ಸಾವನಲ್ಲೆಂದ ॥ ೨೦

ಆವನೀಯಾತುಮನು ನಿತ್ಯನಿ
ರಾವಲಂಬನನಜನು ಶಾಶ್ವತ
ಪಾವನನುತನುಕರಣದಿಂ ಬೇರೆಂದು ನೆರೆಯರಿದ ।
ಆವ ಪರಿಯಿಂದಾಮನುಜನೀ
ಭೂವಲಯದೊಳಗಾರ ಕೊಲುವನು
ಭಾವಿಸಲು ಮತ್ತಾರ ಕೊಲಿಸುವ ಪಾರ್ಥಕೇಳೆಂದ ॥ ೨೧

ಹಳೆಯವಸ್ತ್ರಂಗಳನುಳಿದು ಹೊಸ
ಕೆಲವು ವಸ್ತ್ರಂಗಳನು ಹೊದೆವಂ
ತಿಳೆಯಭೋಗದದೃಷ್ಟ ತೀರಲು ಜೀವನೀತನುವ ।
ಕಳಚಿ ಹೊಸತಾದನ್ಯವಹ ತನು
ಗಳನು ತಾನೈದುತ್ತಿಹನು ನಿಜ
ತಿಳಿಯೆ ದೇಹಭ್ರಮಣೆ ಕೆಡುವುದು ಪಾರ್ಥಕೇಳೆಂದ ॥ ೨೨

ಕಡಿಯಲರಿಯವು ಕೈದುಗಳು ಕೀ
ಳ್ಸುಡಲರಿಯದೈ ಕಿಚ್ಚು ವುದಕವು
ಕಡೆಗೆ ತಾನೆನೆಯಿಕ್ಕಲರಿಯದು ಗಾಳಿ ನೆರೆಪಿಡಿದು ।
ಬಿಡದೆ ಯೊಣಗಿಸಲರಿಯದಾತ್ಮನು
ಕಡೆಗೆ ತಾ ನಿರವಯವನಾಗಿಹ
ಕೆಡಿಸಿಕೊಳುತಿಹ ತನುಗಳಾತ್ಮಂಗಿಲ್ಲ ಕೇಳೆಂದ ॥ ೨೩

ನಿತ್ಯನಾತ್ಮನು ಸರ್ವಗತನ
ತ್ಯುತ್ತಮನು ತಾನಚಲನದರಿಂ
ಸುಸ್ಥಿರನು ತಾನಾದಕಾರಣ ಕಡಿಪೊಡಳವಲ್ಲ ।
ಮತ್ತೆ ಸುಡಲಳವಲ್ಲ ನೀರಿನ
ಲೊತ್ತಿನೆನೆಯಿಸಬಾರದೊಣಗಿಸಿ
ಸತ್ವಗುಂದಿಸಬಾರದೈ ಕಲಿಪಾರ್ಥ ಕೇಳೆಂದ ॥ ೨೪

ಈತನವ್ಯಕ್ತನುಮಚಿಂತ್ಯನು
ಮೀತ ತಾನವಿಕಾರಿ ಯೆಂದಿದ
ನಾತುಮಜ್ಞರು ಪೇಳುತಿಪರದು ಕಾರಣದಲಿನ್ನು ।
ಈತೆರನ ನೀನರಿದು ಬಳಿಕೀ
ಯಾತುಮಂಗೋಸುಗರ ಮನದತಿ
ಭೀತಿಯಿಂದಲಿ ಪಾರ್ಥಶೋಕಿಸಲುಚಿತವಲ್ಲೆಂದ ॥ ೨೫

ಮತ್ತಿದನು ಫಲುಗುಣನೆ ಕೇಳೈ
ನಿತ್ಯ ಜನ್ಮವ ಪಡೆವನಾತ್ಮನು
ನಿತ್ಯ ಸಾವುಳ್ಳವನು ತಾನಹನೆಂದು ಮತಿಗೆಟ್ಟು ।
ಚಿತ್ತದಲಿ ನೀಬಗೆದೆಯಾದಡೆ
ಸತ್ತು ಹುಟ್ಟುವ ಗುಣವ ಕೊಡುವ
ಚಿತ್ತೆನಿಸಿದಾತ್ಮನು ಕುರಿತು ಶೋಕಿಸಲುಬೇಡೆಂದ ॥ ೨೬

ಉದುಭವಿಸಿದಾತ್ಮಂಗೆ ಸಾವೇ
ವಿದಿತ ಸತ್ತಾತ್ಮಂಗೆ ಪುನರಪಿ
ಯುದುಭವಿಸುವುದು ನೆಲೆ ಕಣಾ ಕೇಳದುನಿಮಿತ್ತದಲಿ ।
ಇದಕೆ ಪರಿಹಾರಾರ್ಥವಿಲ್ಲದ
ಹದನ ನೀನೇತಿಳಿದು ಕಡುಶೋ
ಕದಲಿ ಮರುಗುವುದುಚಿತವಲ್ಲೆಲೆಪಾರ್ಥ ಕೇಳೆಂದ ॥ ೨೭

ಮೊದಲಲಿಲ್ಲದ ಭೂತನಿಕರವಿ
ದೊದವಿದೀಮಾಯಾಪ್ರಪಂಚದ
ಲುದಿಸಿದುವು ಮಧ್ಯದಲಿ ತಾಂ ನೆಲೆಯಾಗಿ ತೋರುವುವು ।
ತುದಿಗೆ ತಾವಿವು ತೋರದಡಗುವು
ವಿದನು ನೀ ನೆರೆತಿಳಿದು ದೇಹದ
ವಧೆಗೆ ಮಾಡುವ ಶೋಕವಾವುದು ಪಾರ್ಥ ಹೇಳೆಂದ ॥ ೨೮

ಅತಿಮಹಾಶ್ಚರ್ಯದವೊಲಾತ್ಮೋ
ನ್ನತಿಯನೊಬ್ಬನೊಳೊಬ್ಬ ಕಾಂಬನು
ಅತಿ ಮಹಾಶ್ಚರ್ಯದವೊಲಿನ್ನೊಬ್ಬನು ನುಡಿಯುತಿಹನು ।
ಅತಿ ಮಹಾಶ್ಚರ್ಯದವೊಲಾತ್ಮ
ಸ್ಥಿತಿಯ ಕೇಳುವ ಕೇಳ್ದರೆಯು ನೆರೆ
ಮತಿಯೊಳಾತ್ಮ ನನರಿಯನೆಲೆ ಕಲಿಪಾರ್ಥ ಕೇಳೆಂದ ॥ ೨೯

ಈತೆರದಲಿ ಚರಾಚರದ ವಿ
ಖ್ಯಾತದೇಹಂಗಳಲಿ ನೆಲಸಿ
ರ್ಪ್ಪಾತುಮನು ನಿತ್ಯನು ನಿರಾಮಯನಾಗಿ ತಾನೆಲಗೆ ।
ಆತ ಕೈದುಗಳಿಂದ ನೆರೆಸಾ
ವಾತನಲ್ಲಾ ಈಚರಾಚರ
ಭೂತನಿಕರವನಿತ್ಯವಿದ ಕುರಿತಳಲಬೇಡೆಂದ ॥ ೩೦

ನಿನ್ನ ಧರ್ಮವನಾದರೆಯು ನೀ
ಸನ್ನಿಹಿತಚಿತ್ತದಿ ನಿರೀಕ್ಷಿಪು
ದುನ್ನತದ ಸಮರದಲಿ ಹಿಮ್ಮೆಟ್ಟುವುದುಚಿತವಲ್ಲ ।
ಇನ್ನದೇಕೆನೆ ಕ್ಷತ್ರಿಯಂಗೆ ನಿ
ಜಾನ್ವಯದ ಹರಿವಾದರೆಯು ಸಂ
ಪನ್ನಧರ್ಮದ ಸಮರದಿಂ ಬೇರಿಲ್ಲಲೇಸೆಂದ ॥ ೩೧

ಎಲೆಧನಂಜಯ ಪುಣ್ಯದಿಂ ತಾ
ಸೊಲಿದು ತೆರೆದ ಸುರೇಂದ್ರಲೋಕದ
ಚೆಲುವಗೋಪುರದಂತೆಸೆಯುತಿಹ ಧರ್ಮಯುದ್ಧವನು ।
ಹಲವುಸುಕೃತವಮಾಡಿದೀಸ
ತ್ಕುಲದ ಕ್ಷತ್ರಿಯರೇ ಪಡೆವರಿದು
ಸುಲಭವಲ್ಲಿದವರಿಗೆಂದನು ದಾನವಧ್ವಂಸಿ ॥ ೩೨

ಇದಿರಲಿರುವಿಧರ್ಮ ಯುದ್ಧಕೆ
ಹೆದರಿ ಹಿಮ್ಮೆಟ್ಟಿದರೆ ಬಳಿಕೇ
ನದರ ಸಹಧರ್ಮವನು ಕೀರ್ತಿಯನಿರದೆ ನೆರೆ ಬಿಟ್ಟು ।
ಒದವಿದಾಪಾತಕವನೈದುವೆ
ವಿದಿತವಿದನೀನರಿದು ಫಲುಗುಣ
ಕದನಕಂಭೈಸುವುದು ಮತವೆಂದನು ಮುರಧ್ವಂಸಿ ॥ ೩೩

ಕದನಕರ್ಜುನನಂಜಿ ಹೆರಸಾ
ರಿದನೆನುತ ನೆರೆ ಒಗೆವರಲ್ಲದೆ
ಯದುಭುತದ ಪಾತಕಕೆ ತೊಲಗಿದನೆನ್ನರೀನೃಪರು ।
ಆದರಿನಿಂನೀನೆಲ್ಲರಿಗೆ ಪೂ
ರ್ವದಲಿ ಬಲ್ಲಿದನೆನಿಸಿ ಯಿಂದಿವ
ರಿದಿರೊಳತಿಲಘುವಹೆ ಕಣಾ ಕಲಿಪಾರ್ಥ ಕೇಳೆಂದ ॥ ೩೪

ನಿನ್ನ ಸಾಮರ್ಥ್ಯವನು ನಿಂದಿಸಿ
ನಿನ್ನ ಹಗೆಗಳು ಹಲವು ಪರಿಯಲಿ
ನಿನ್ನನತಿಲಘುಮಾಡಿ ಬಿಡದುರೆ ಚುನ್ನವಾಡುವರು ।
ಇನ್ನುನಿನಗದರಿಂದ ಮಿಗಿಲಹ
ಬನ್ನಬಡಿಸುವ ದುಃಖವಾವುದು
ನಿನ್ನ ಗಿನೇ ಳಿಯುಲದರಿಂದಧಿಕವಿಲ್ಲೆಂದ ॥ ೩೫

ಕದನದಲಿ ನೀ ಮಡಿದೆಯಾದರೆ
ಮುದದಲೈದುವೆ ಸ್ವರ್ಗವನು ಮೇ
ಣಿದನು ನೀನೇ ಗೆಲಿದೆಯಾದರೆ ಭೂತಳದ ಸಿರಿಯ ।
ಹದುಳಸುಖದಲಿ ಭೋಗಿಸುವೆ ಕೇ
ಳದುನಿಮಿತ್ತದಲೇಳು ಫಲುಗುಣ
ಕದನಕತಿಮುದದಿಂದಲುದ್ಯೋಗವನು ಮಾಡೆಂದ ॥ ೩೬

ಕಾದುವೊಡೆ ಸುಖದುಃಖವನು ನಿನ
ಗಾದ ಲಾಭಾಲಾಭವನು ನೆರೆ
ಕಾದಿದಲ್ಲಿಯ ಜಯಪರಾಜಯವಿನಿತನೆಲ್ಲವನು ।
ಭೇದಿಸದೆ ಸರಿಮಾಡಿ ಬಳಿಕಲಿ
ಕಾದು ಈಪರಿ ಕಾದಿದುದರಿಂ
ದೈದದಿಹೆ ದುಷ್ಕೃತವನೀನೆಲೆಪಾರ್ಥ ಕೇಳೆಂದ ॥ ೩೭

ಎಲೆಧನಂಜಯ ಸಾಂಖ್ಯದಲ್ಲಿಯ
ಲಲಿತವಹ ಬುದ್ಧಿಯನು ಹೇಳಿದೆ
ನೊಲವಿನಿಂ ಕೇಳಿದರೆ ಪೇಳ್ವೆನು ಯೋಗಬುದ್ಧಿಯನು ।
ನೆಲೆಗೆ ನೀನಾಯೋಗಬುದ್ಧಿಯ
ಚಲಿಸದದ ಕೈಕೊಂಡೆಯಾದರೆ
ಹಲವುಕರ್ಮದ ಕಟ್ಟುಗಳ ನೆರೆಹರಿವೆ ಕೇಳೆಂದ ॥ ೩೮

ಪಿರಿದೆನಿಸುವೀಯೋಗದಲ್ಲಿಯೆ
ಚರಿಸುತಿರಲಂತರಿತವಾದರೆ
ನಿರುತದಿಂ ಕೇಡಿಲ್ಲ ಬಿಟ್ಟರೆ ಪಾಪ ತಾನಿಲ್ಲ ।
ದೊರಕಿದನಿತೇ ಧರ್ಮಲೇಶವು
ಪಿರಿದೆನಿಪ ಸಂಸಾರದುಃಖದ
ಶರಧಿಯನು ದಾಂಟಿಸುವುದೆಲೆ ಕಲಿಪಾರ್ಥ ಕೇಳೆಂದ ॥ ೩೯

ಕುರುಕುಮಾರಕ ಮೋಕ್ಷಮಾರ್ಗಕೆ
ಪರಮಸಾಂಖ್ಯದ ಬುದ್ಧಿಯೊಂದೇ
ನಿರುತದಿಂ ಸಾಧನವಹುದು ವೈರಾಗ್ಯಯುಕ್ತರಿಗೆ ।
ಇರದೆ ವಿಷಯಾಸಕ್ತರೆನಿಸುವ
ಪರಿಯನರಿಯದ ಕರ್ಮಿಗಳ ದು
ಸ್ತರದ ಬುದ್ಧಿಯನಂತಬಹುಶಾಖೆಗಳನೈದಿಹುದು ॥ ೪೦

ಕರ್ಮಪರವಹ ವೇದವನು ನೆರೆ
ನೆಮ್ಮಿ ಭೋಗಾಸಕ್ತರಾಗಿಹ
ಕರ್ಮಿಗಳು ವರಮೋಕ್ಷ ತತ್ವಜ್ಞಾನವೆಂದೆನಿಪ ।
ಧರ್ಮವೇ ತಾನಿಲ್ಲೆನುತ ಬಹು
ಕರ್ಮವೆನಿಸುವ ಬಂಜೆಹೂವಿನ
ಧರ್ಮವಿಡಿದೀಮಾತ ನುಡಿವರು ಪಾರ್ಥ ಕೇಳೆಂದ ॥ ೪೧

ವಿಷಯದಾಸಕ್ತರುಗಳೇ ಬಹು
ವಿಷಯದೊದವಿನ ಸ್ವರ್ಗವನು ತ
ದ್ವಿಷಯಭೋಗೈಶ್ವರ್ಯಲಾಭಂಗಳನು ನೆರೆ ಬಯಸಿ ।
ವಿಷಯಜನ್ಮಂಗಳನು ಕೊಡುವಾ
ಯಸದ ಕರ್ಮಂಗಳನು ಮಾಡುತ
ಹೊಸಪರಿಯ ದುಃಖಂಗಳಲಿ ತೊಳಲುವರು ಕೇಳೆಂದ ॥ ೪೨

ಭೋಗಲಂಪಟರಾಗಿ ಫಲದನು
ರಾಗವನು ಹುಟ್ಟಿಸುವ ಶ್ರುತಿಗಳ
ಭಾಗದಿಂ ಮೋಹಿಸುವ ಚಿತ್ತವನುಳ್ಳ ಮನುಜರಿಗೆ ।
ಯೋಗಸಾಂಖ್ಯಸಮಾಧಿಯುತರಹ
ಯೋಗಿಗಳ ಮತ ಗೋಚರಿಸದು
ದ್ಯೋಗದಿಂ ಕರ್ಮಂಗಳಿಗೆ ತಿರುಗುವರು ಕೇಳೆಂದ ॥ ೪೩

ವೇದವೀತ್ರೈಗುಣ್ಯವಿಷಯದ
ಹಾದಿಯಲಿ ನಡೆಯಿಸಲು ಸತ್ವಗು
ಣೋದಯದಿ ಬಂದುದನು ರಕ್ಷಿಸಿ ಬಾರದಿದ್ದುದನು ।
ಆದರಿಸಿ ಬಯಸದಖಿಲದ್ವಂ
ದ್ವಾದಿಗಳ ನೆರೆ ಬಿಟ್ಟು ನಿನ್ನನು
ಭೇದವಿಲ್ಲದೆ ತಿಳಿದು ತ್ರಿಗುಣಾತೀತನಾಗೆಂದ ॥ ೪೪

ಹಳ್ಳ ನದಿ ಕೆರೆ ಭಾವಿಗಳ ಜಲ
ದಲ್ಲಿ ತನಗೆನಿತುದಕ ಬೇಕದ
ನೆಲ್ಲವನುಪಾರ್ಜಿಸಲುದಧಿಯೊಳು ಗಣಿಸುವಂದಲಿ ।
ಬಲ್ಲವಿಪ್ರಂಗಖಿಳಶ್ರುತಿಮುಖ
ದಲ್ಲಿ ದೊರಕೊಂಬನಿತದೆಲ್ಲವು
ನಿಲ್ಲದಾತ್ಮ ಜ್ಞಾನದಿಂದಹುದೆಂದನಸುರಾರಿ ॥ ೪೫

ಕರ್ಮದಲ್ಲಧಿಕಾರಿ ನೀ ಸ
ತ್ಕರ್ಮವನು ಮಾಡುವುದು ಬಳಿಕಾ
ಕರ್ಮನಿರ್ಮಿತದಿಂದ ಹೆಚ್ಚುತಲಿಹ ಫಲಂಗಳನು ।
ನೆಮ್ಮದಿರು ಜನ್ಮವನು ಕೊಡುವವಿ
ಕರ್ಮಕಾರಣನಾಗದಿರು ಸ
ತ್ಕರ್ಮದಲಿ ಸನ್ಯಾಸವನು ಮಾಡದಿರು ನೀನೆಂದ ॥ ೪೬

ಎಲೆಧನಂಜಯ ಯೋಗದಲಿ ನೀ
ನೆಲಸಿ ಫಲವನು ಬಿಟ್ಟು ಕರ್ಮವ
ನೊಲಿದು ಮಾಡೈ ಹಾನಿವೃದ್ಧಿಗಳಲ್ಲಿ ಸಮನಾಗಿ ।
ನೆಲೆಗೊಳಲು ಕೇಳಾಸುಕರ್ಮದ
ಫಲವ ಬಿಟ್ಟು ಸಮತ್ವವನು ನಿ
ರ್ಮಲದ ಯೋಗವೆನುತ್ತಿಹರು ತಿಳಿಯೆಂದನಸುರಾರಿ ॥ ೪೭

ಎಲೆಧನಂಜಯ ಮೋಕ್ಷವನು ತಾ
ನೊಲಿದು ಕೊಡುತಿಹ ಬುದ್ಧಿ ಯೋಗವು
ಸುಲಭ ಕೇಳದರಿಂದ ಸಂಸಾರವನು ನೆರೆ ಕೊಡುವ ।
ಫಲದಕರ್ಮದಿ ಹೀನನಾಗಿಯೆ
ಒಲಿದು ಮರೆಯೊಗು ಬುದ್ಧಿಯೋಗವ
ಫಲವ ಬಯಸುವರಧಮರೆಲೆ ಕಲಿಪಾರ್ಥ ಕೇಳೆಂದ ॥ ೪೮

ಈಪರಿಯ ವರಬುದ್ಧಿ ತನಗು
ಳ್ಳಾಪುರುಷನೀಸುಕೃತದುಷ್ಕೃತ
ರೂಪುಗಳನೆರಡುವನು ಬಿಡುತಿಹನದು ನಿಮಿತ್ತದಲಿ ।
ಆಪರಮವಹ ಯೋಗಕೋಸುಗ
ನೀ ಪ್ರಯತ್ನವ ಮಾಡು ಯೋಗದ
ರೂಪು ಕೇಳಾಫಲವ ಬಿಟ್ಟಿಹ ಜಾಣತನವೆಂದ ॥ ೪೯

ಬುದ್ಧಿಯುಕ್ತರು ಕರ್ಮದಿಂದ ಸ
ಮೃದ್ಧವಾಗಿಹ ಫಲದ ಭೋಗವ
ಹೊದ್ದದೆಯೆ ನೆರೆ ಬಿಟ್ಟು ತತ್ತ್ವಜ್ಞಾನ ನಿಷ್ಠೆಯಲಿ ।
ಇದ್ದವರುಗಳು ಜನ್ಮಬಂಧವ
ಗೆದ್ದು ಬಿಡುಗಡೆವಡೆದು ಕ್ಷುದ್ರೋ
ಪದ್ರವಿಲ್ಲದೆ ನಿಜವನೈದುವರೆಂದನಸುರಾರಿ ॥ ೫೦

ನಿನ್ನಮತಿ ಯಾವಾಗ ಕೇಳೀ
ಭಿನ್ನ ಮಾಯಾಗುಣದ ಕಡಲನು
ಉನ್ನತದ ವರಬೋಧೆಯಿಂ ದಾಂಟುವುದೊ ತಕ್ಷಣದಿ ।
ಮುನ್ನ ನೀ ಕೇಳ್ದುದಕೆ ನೀಮುಂ
ದಿನ್ನು ಕೇಳುವುದಕ್ಕೆ ಮಿಗೆ ನಿ
ರ್ವಿಣ್ಣನಪ್ಪೆ ಪಾರ್ಥ ಎಂದನು ದಾನವಧ್ವಂಸಿ ॥ ೫೧

ಹಲವು ಶ್ರುತಿಗಳ ಕೇಳಿ ಪರಿಪರಿ
ಚಲಿಪ ನಿನ್ನಯ ಬುದ್ಧಿಯಿನಿಸುಂ
ಚಲಿಸದೇತದ್ವಾಸನೆಯ ವಿಪರೀತಭಾವನೆಯ ।
ಕಳೆದು ಬ್ರಹ್ಮ ಸಮಾಧಿಯಲ್ಲಿ ನಿ
ಶ್ಚಲಿತದಿಂ ನಿಂದಾಗ ನೆರೆ ನಿ
ರ್ಮಲವೆನಿಪ ವರಯೋಗಸಿದ್ಧಿಯ ಪಡೆವೆ ನೀನೆಂದ ॥ ೫೨

ಪರಮಸಾಂಖ್ಯವ ಬುದ್ಧಿಯೋಗವ
ಕರುಣಿಸದೆ ಕಮಲಾಕ್ಷ ಬುದ್ಧಿಯ
ಭರವ ನೆಲೆವಿಡಿದಾಸ್ಥಿರಪ್ರಜ್ಞನು ಸಮಾಧಿಯಲಿ ।
ಇರುತಲೇನನು ನುಡಿವ ಕುಳ್ಳಿಹ
ಪರಿಯದಾವುದದೆಂತು ನಡೆವನು
ಹಿರಿಯರೇನೆಂದೆಂಬರದ ಹೇಳೆಂದನಾಪಾರ್ಥ ॥ ೫೩

ಮನದಲಿಹ ಬಯಕೆಗಳನೆಲ್ಲವ
ನೆನೆಯದಾವಾಗಲು ಬಿಡುವನಾ
ತ್ಮನಲಿ ನಿಷ್ಠಿತನಾಗಿ ಪರಮಾನಂದಮಯವೆನಿಪ ।
ಚಿನುಮಯನೊಳೊಡಗೂಡಿ ತುಷ್ಟಿಯ
ಘನತೆಯಿಂದಿಹನಾವನಾತನೆ
ಮುನಿಗಳಾದರಿಪಾಸ್ಥಿರಪ್ರಜ್ಞನು ವಿಚಾರಿಸಲು ॥ ೫೪

ಹೆದರದೀತಾಪತ್ರಯಂಗಳ
ಪದದ ನಾನಾದುಃಖದಲಿ ನೆರೆ
ಮುದದಲಾಸಕ್ತಿಯನು ಮಾಡದೆ ಕರಣಮೂರರಲಿ ।
ಉದಿತಕಾಮಕ್ರೋಧಭೀತಿಯ
ನೊದೆದು ಬಿಟ್ಟ ಮುನೀಶ್ವರನು ತಾ
ವಿದುಗಳಿಂ ಸ್ಥಿರಬುದ್ಧಿಯೆನಿಸುವನೆಂದನಸುರಾರಿ ॥ ೫೫

ಆವನೊಬ್ಬ ಸಮಸ್ತ ವಸ್ತುಗ
ಣಾವಳಿಗಳಲಿ ಮಮತೆಯಿಲ್ಲದೆ
ಜೀವಿಪನು ಪ್ರಾರಬ್ಧವಶದಿಂ ಬಂದಲೇಸಿನಲಿ ।
ಭಾವದಿಂ ಹಾರೈಸಿ ಪೊಲ್ಲಹ
ತಾವಿನಲಿ ದುಃಖಿಸನು ತಿಳಿಯಲಿ
ಕಾವಿವೇಕಿಯ ಪ್ರಜ್ಞೆನೆಲೆಯೆನಿಸುವುದು ಕೇಳೆಂದ ॥ ೫೬

ನಡೆಯುತಿಹ ಕೂರುಮನು ತನ್ನಯ
ಒಡಲೊಳಗೆ ಕೈಕಾಲನೆಲ್ಲವ
ನಡಗಿಸುವವೊಲಿಂದ್ರಿಯಂಗಳ ವಿಷಯದಲ್ಲಿಂದ ।
ಅಡಿಗಡಿಗೆ ತೆಗೆತೆಗೆದು ತನ್ನಲಿ
ದೃಢದಿ ನಿಲಿಸುವನಾವನಾತನ
ಬಿಡದೆ ತೋರುವ ಪ್ರಜ್ಞೆನೆಲೆಯೆನಿಸುವುದು ಕೇಳೆಂದ ॥ ೫೭

ರುಜೆಯಡಸಲಾಹಾರವಿಲ್ಲದೆ
ನಿಜವರಿಯದಾತಂಗೆ ವಿಷಯ
ವ್ರಜತೊಲಗುವುದು ತನ್ನಲಿರುತಿಹ ಬಯಕೆ ಪೊರಗಾಗೆ ।
ವಿಜಯ! ಕೇಳಾಬಯಕೆ ವಿಷಯ
ವ್ರಜಸಹಿತ ತೊಲಗುವುದು ತನ್ನೀ
ನಿಜವನರಿದಿಹ ವರಮುನಿಗೆ ಕೇಳೆಂದನಸುರಾರಿ ॥ ೫೮

ವರಮುಕುತಿಗೋಸುಗರ ಯೋಗವ
ನಿರದೆಯಭ್ಯಾಸವನು ಮಾಡುವ
ಗರುವ ಪುರುಷನ ಮನವ ಮುಂತಾಗೆಳೆದು ಬಲುಪಿನಲಿ ।
ತಿರುಗುವುದು ವಿಷಯಂಗಳಲ್ಲಿಗೆ
ಮರುಳ ಕರಣಸಮೂಹವಿದು ನೆರೆ
ಮರುಳುಗೊಳಿಸುವುದಾರನಾದರು ಪಾರ್ಥ ಕೇಳೆಂದ ॥ ೫೯

ಅದುನಿಮಿತ್ತ ಖಿಲೇಂದ್ರಿಯಂಗಳ
ಮದವ ಮುರಿದು ನಿರೋಧಿಸುತಲತಿ
ಮುದದಿ ಯೋಗಾಭ್ಯಾಸದಿಂದೆನ್ನಲ್ಲಿ ಭಕ್ತಿಯನು ।
ಒದವಿಸುತಲಿರಲಿಂದ್ರಿಯಂಗಳು
ತುದಿಯಲಾವನ ವಶವಹವು ಕೇಳ್
ಬುಧರ ಮತದಿಂದಾಮಹಾತ್ಮಂಗಿರದೆ ನೆಲೆಯಹುದು ॥ ೬೦

ವಿಷಯಹಲವನು ನೆನೆವ ಮನುಜಗೆ
ವಿಷಯದಲ್ಲಿಯ ಸಲುಗೆ ಪುಟ್ಟುಗು
ವಿಷಯಸಂಗದದೆಸೆಯಲುದಿಸುಗು ಕಾಮಿಸುವ ಶಕ್ತಿ ।
ಹೊಸಪರಿಯ ಕಾಮನು ನೆರೆ ಬಂ
ಧಿಸಲಿಕದರಿಂ ಕ್ರೋಧ ಸಲೆ ಜನಿ
ಯಿಸುವುದೈ ಕೇಳೆಂದನಸುರಾರಾತಿ ಫಲುಗುಣನ ॥ ೬೧

ಅದರಿನವಿವೇಕವು ಜನಿಯಿಸುವು
ದದರದೆಸೆಯಿಂ ಸಕಲಶಾಸ್ತ್ರದ
ಲೊದವಿದಾಸ್ಮೃತಿ ಕೆಡುವುದಾಸ್ಮೃತಿ ಕೆಡಲಿಕಾಬಳಿಕ ।
ತುದಿಗೆ ನಿಶ್ಚಯಜ್ಞಾನ ಕೆಡುತಿಹು
ದದು ಕೆಡಲು ಬಳಿಕಾತ ಮೋಕ್ಷದ
ಪದವ ಪಡೆಯದೆ ಕೆಟ್ಟು ಹೋಹನು ಪಾರ್ಥ ಕೇಳೆಂದ ॥ ೬೨

ಅದುನಿಮಿತ್ತ ಮುಮುಕ್ಷುವಾದವ
ನುದಿತಕಾಮಕ್ರೋಧವಳಿದುಳಿ
ದೊದವಿ ತನ್ನಯಧೀನವಾದಿಂದ್ರಿಯ ನಿಕರದಿಂದ ।
ವಿಧಿವಿಹಿತ ವಿಷಯಂಗಳನು ತಾ
ಹದುಳದಿಂ ಭೋಗಿಸುವ ಚಿತ್ತನು
ಸದಮಳದ ಶಾಂತಿಯನು ಪಡೆವನು ಪಾರ್ಥ ಕೇಳೆಂದ ॥ ೬೩

ಪರಮಶಾಂತಿಯ ಪಡೆದು ತಾನತಿ
ಹರುಷದಿಂದಿಹ ಮುನಿಗೆ ದುಃಖದ
ನೆರವಿಗಳು ನೆಗೆ ಕೆಟ್ಟು ಹೋಹುವು ನಿಮಿಷಮಾತ್ರದಲಿ ।
ನಿರುತ ನಿರ್ಮಲ ಚಿತ್ತನಾಗಿಹ
ಪರಮಯೋಗಿಗೆ ಶುದ್ಧಚಿತ್ತದಿ
ಪರಮತತ್ತ್ವ ಜ್ಞಾನ ನೆಲಸಿಹುದೆಂದನಸುರಾರಿ ॥ ೬೪

ನಿರುತದಿಂ ಶಾಸ್ತ್ರಾರ್ಥವರಿಯದ
ನರಗೆ ದೊರಕದು ಯೋಗವದು ತಾ
ದೊರಕದಿಹ ಮನುಜಂಗೆ ಮನನಾದಿಗಳು ಸಿದ್ಧಿಸವು ।
ಪರಮಮನನಶೂನ್ಯಂಗೆ ದೊರಕದು
ಪರಮಶಾಂತಿಯು ಶಾಂತಿ ದೊರಕದ
ನರಗೆ ಸುಖವೆಲ್ಲಿಯದು ಕೇಳೆಂದನು ಮುರಧ್ವಂಸಿ ॥ ೬೫

ವಿಷಯದಭಿಮುಖದಿಂದ್ರಿಯಂಗಳ
ವಶವೆನಿಸುತಿಹುದಾವನೊಬ್ಬನ
ಸಸಿನಿರದ ಮನವವನ ಪ್ರಜ್ಞೆಯನಿರದದುರೆಕೆಡಿಸಿ ।
ದೆಸೆಗೆಡಿಸುವುದು ಕೇಳದೆಂತೆನೆ
ಪಸರಿಸಿದ ಶರಧಿಯೊಳು ನಾವೆಯ
ವಿಷಮಮಾರುತವೆಳೆದೊಯಿದು ಮುರಿದಿಕ್ಕುವಂದದಲಿ ॥ ೬೬

ಅದುನಿಮಿತ್ತದೊಳಾವನೊಬ್ಬನು
ಒದವಿದಿಂದ್ರಿಯಗಳನು ವಿಷಯದ
ಸದನದಿಂ ಬರಸೆಳೆದು ನೆರೆ ನಿಗ್ರಹಿಸಿ ಕೊಂಡಿಹನು ।
ಅದರಿನಾತನ ಬುದ್ಧಿತತ್ತ್ವದ
ಪದವಿಯಲಿ ನೆಲೆಗೊಂಬುದವನನು
ಬುಧರು ಸುಸ್ಥಿರಬುದ್ಧಿಯೆಂಬರು ಪಾರ್ಥ ಕೇಳೆಂದ ॥ ೬೭

ಆವುದೊಂದಭೇದದೃಷ್ಟಿಯ
ಭಾವದಮಳಜ್ಞಾನಜ್ಯೋತಿಯೋ
ಜೀವರಿಗೆ ಕತ್ತಲೆಯದರಲೆಚ್ಚತ್ತಿಹನುಯೋಗಿ ।
ಆವ ಭೂತಂಗಳಿಗೆ ಭೇದದ
ಭಾವದೆಚ್ಚರು ತಾನಿಹುದೊ ಸ
ದ್ಭಾವವನು ತಿಳಿದಿಹ ಮುನಿಗೆ ಕತ್ತಲೆಯದೆನಿಸುಪುದು ॥ ೬೮

ತುಂಬಿ ಚಲಿಸದೆ ಸ್ಥಿರವೆನಿಸುತಿ
ರ್ಪ್ಪಂಬುಧಿಯನುದಕೌಘ ನೆರೆ ಬೊ
ಕ್ಕಿಂಬುಗೊಂಡೇಕತ್ವವನು ಪಡೆವಂತೆ ಬಯಕೆಗಳು ।
ಸ್ತಂಭಿಸುವುವಾವನಲತಾನೇ
ಬೆಂಬಿಡದೆ ಮೋಕ್ಷವ ಪಡೆದು ವಿಷ
ಯಾಂಬುಧಿಯಲಾಡುವನು ಶಾಂತಿಯನೈದಿ ಕೇಳೆಂದ ॥ ೬೯

ವಿಷಯವೆಲ್ಲವ ಬಿಟ್ಟು ನೆರೆ ನಿ
ರ್ವಿಷಯವೆನಿಪಾಹಮ್ಮಮತೆಗಳ
ದೆಸೆಯ ಹೊದ್ದದೆ ಜ್ಞಾನಿ ತಾನಹೆನೆಂಬ ಹಮ್ಮಳಿದು ।
ಸಸಿನೆ ಚಲಿಸದೆ ನಿಸ್ಪೃಹತೆಯಿಂ
ದೆಸೆಯುತಿಹ ವರಯೋಗಿ ತಾ ನೆರೆ
ಹೊಸತೆನಿಪ ಮುಕ್ತಿಯನು ಪಡೆವನು ಪಾರ್ಥ ಕೇಳೆಂದ ॥ ೭೦

ಈ ಪರಿಯ ವರಸಾಂಖ್ಯಯೋಗದ
ರೂಪು ಬ್ರಹ್ಮದ ನಿಷ್ಠೆ ಯಿದರನು
ರೂಪಿನಲಿ ನೆಲೆಗೊಂಡವನು ಮರೆದಿರನು ನಿಜಪದವ ।
ಆಪರಮನಿಷ್ಠೆಯಲಿ ನೆಲೆಗೊಂ
ಡಾಪುರುಷನವಸಾನಕಾಲದ
ಲಾಪರಬೊಮ್ಮವನು ಪಡೆವನು ಪಾರ್ಥ ಕೇಳೆಂದ ॥ ೭೧

- ಇಂತು ಸಾಂಖ್ಯಯೋಗವೆಂಬ ಎರಡನೇ ಅಧ್ಯಾಯ ಸಂಪೂರ್ಣ -

---

# ಮೂರನೇ ಅಧ್ಯಾಯ - ಕರ್ಮಯೋಗ

ಸೂಚನೆ ॥ ವೀರಪಾರ್ಥಂಗಖಿಳಭುವನಾ
ಧಾರ ಹರಿ ಕರುಣದಲಿ ಶ್ರುತಿಗಳ
ಸಾರವಹ ಸತ್ಕರ್ಮ ಯೋಗವನೊಲಿದು ಬೋಧಿಸಿದ ॥

ಎಲೆಜನಾರ್ದನ ಬುದ್ಧಿಯೋಗವು
ಹೊಲಬುಗೆಡಿಸುವ ಕರ್ಮದಿಂ ತಾ
ನೆಲಗೆ ಮಿಗಿಲಾದರೆಯದೇತಕೆ ಕರ್ಮಯೋಗದಲಿ ।
ಚಲಿಸಲೆನ್ನನು ಬೋಧಿಸುತಲಿಹೆ
ಹಲವು ಕರ್ಮದ ಹೊರೆಯೆನಿಸುವಾ
ಬಲೆಯೊಳಗೆ ಸಿಲುಕಿಸುವುದುಚಿತವೆ ಯೆಂದನಾಪಾರ್ಥ ॥ ೧

ದೇವ ಸಂದೇಹದ ವಚನದಿಂ
ದೀವಿಮಲವಾದೆನ್ನ ಮತಿಯನು
ಭಾವಿಸಲು ಮೋಹಿಸುತಲಿಹೆ ನೀನದುನಿಮಿತ್ತದಲಿ ।
ಆವಮತದಿಂದಾನು ಲೇಸನು
ಭಾವದಿಂದೈದುವೆನದೊಂದನು
ನೀವೆನಗೆ ನಿರ್ಧರಿಸಿ ಬೆಸಸುವುದೆಂದನಾಪಾರ್ಥ ॥ ೨

ವರಧನಂಜಯ ಪೂರ್ವದಲಿ ನಾ
ನೊರೆದೆ ಮೋಕ್ಷೋಪಾಯವನು ಕೇ
ಳೆರಡುಪರಿಯಲದೆಂತೆನಲು ನಿಜಸಾಂಖ್ಯನಿಷ್ಠರಿಗೆ ।
ವರಮುಕುತಿಗಾಬುದ್ಧಿಯೋಗವು
ದೊರಕುವುದು ಮೋಕ್ಷಾರ್ಥಿಗಳಿಗ
ತ್ಯುರುತರದ ಸತ್ಕರ್ಮದಿಂ ಕೈವಲ್ಯವಹುದೆಂದ ॥ ೩

ಕರ್ಮವನು ಜಡಭಾವವಂ ನೆರೆ
ನೆಮ್ಮಿಮಿಗೆ ಮಾಡದ ಪುರುಷನೀ
ಕರ್ಮಪದವಹ ಮುಕ್ತಿಯನು ತಾನೈದ ಮುದದಿಂದ ।
ಕರ್ಮಚಯಸನ್ಯಾಸಮಾತ್ರದಿ
ನಿರ್ಮಲದ ಸುಜ್ಞಾನವಿಲ್ಲದೆ
ಧರ್ಮವಹ ಪರತತ್ವವನು ತಾನೈದ ಕೇಳೆಂದ ॥ ೪

ಒಂದುಕ್ಷಣ ಕರ್ಮವನು ಮಾಡದೆ
ನಿಂದಿರನು ಕೇಳಾವಮರ್ತ್ಯನು
ಸಂದಮಾಯೆಯ ಗುಣಗಳಿಂದೀತೋರ್ಪಜಗವೆಲ್ಲ ।
ಬಂದಿ ಪರವಶತೆಯನು ಘನನಿ
ರ್ಬಂಧದಿಂ ಕರ್ಮವನು ಮಾಡುವು
ದಿಂದುನಿನ್ನಿಸದಲ್ಲನಾದಿಯ ವಿದ್ಯೆ ಕೇಳೆಂದ ॥ ೫

ಈ ಸಕಲ ಕರ್ಮೇಂದ್ರಿಯಂಗಳ
ಸೂಸಲೀಯದೆ ನಿಲಿಸಿ ಪೂರ್ವದ
ವಾಸನೆಯ ಬಲುಹಿಂದ ಬಕನಂದದಲಿ ಮನದೊಳಗೆ ।
ಆ ಸಕಲವಿಷಯವನು ನೆನೆಯುತ
ಲೇಸು ತಪವನು ವಿರಚಿಸಿದೊಡಂ
ದೋಷ ಮೂಢನು ತಿಳಿಯೆ ಮಿಥ್ಯಾಚಾರಿಯೆನಿಸುವನು ॥ ೬

ಆವನೀಜ್ಞಾನೇಂದ್ರಿಯಂಗಳ
ನಾವಿಷಯದಿಂ ತೆಗೆದು ಮನದಲಿ
ಭಾವಿಸದೆ ನಿಗ್ರಹಿಸಿ ನಿಜಯೋಗದಲಿ ನೆಲೆಗೊಳಿಸಿ ।
ಈ ವಿವಿಧಗುಣಕರ್ಮಯೋಗವ
ನಾವ ಫಲದಾಸಕ್ತಿಯಿಲ್ಲದೆ
ಭಾವದಿಂ ಮಾಡುವವನುತ್ತಮನೆಂದನಸುರಾರಿ ॥ ೭

ವಿಹಿತಕರ್ಮವ ಮಾಡು ಸುಮ್ಮನೆ
ಯಿಹುದರಿಂ ಕರ್ಮವನು ಮಾಡುತ
ಲಿಹುದು ತಾನತ್ಯಧಿಕ ಕರ್ಮವ ಬಿಟ್ಟಿಹುದರಿಂದ ।
ಇಹದ ನಿನ್ನ ಶರೀರಯಾತ್ರೆಯ
ಬಹಳಸುಖ ಮುಂತಾಗಿ ಸಿದ್ಧಿಸ
ದಿಹಪರಕೆ ಸತ್ಕರ್ಮವೇ ಹಿತವೆಂದನಸುರಾರಿ ॥ ೮

ಈ ಸಕಲಜನವೀಶ್ವರಾರ್ಪಣ
ಕೋಸುಗವೆ ವಿರಚಿಸುವ ಕರ್ಮದ
ಲೇಸ ನೆರೆಬಿಟ್ಟುಳಿದ ಕರ್ಮದಿ ಬದ್ಧವಾಗಿಹುದು ।
ಆಸೆಯನು ಬಿಟ್ಟದುನಿಮಿತ್ತದ
ಲೀಸಕಲ ಕರ್ಮಂಗಳನು ಜಗ
ದೀಶ್ವರಾರ್ಪಿತವಾಗಿ ನೀ ಮಾಡೆಂದನಸುರಾರಿ ॥ ೯

ಅಜನು ಮುನ್ನವೆ ಯಜ್ಞಸಹಿತೀ
ಪ್ರಜೆಗಳನು ನಿರ್ಮಿಸಿ ನಿಮಗೆ ಯೀ
ಯಜನದಿಂ ಸಂತಾನವಾಗಲಿ ನೀವು ಬಯಸಿದುದ ।
ಯಜನ ತಾನೇ ಕೊಡುವುದಾಗಲಿ
ವಿಜಯರಾಗಿಹುದೆಂದನಾಕಮ
ಲಜನ ಕಥನದಿನಾದುದದು ಕೇಳೆಂದನಸುರಾರಿ ॥ ೧೦

ದೇವರನು ನೀಮ್ ಯಜ್ಞದಿಂದಲಿ
ಸೇವಿಸಲು ಸಂತುಷ್ಟರಾಗಿಹ
ದೇವರಿಷ್ಟವ ಕೊಟ್ಟು ನಿಮ್ಮನು ತುಷ್ಟಿಬಡಿಸುವರು ।
ದೇವತೆಗಳನು ನೀವು ನಿಮ್ಮನು
ದೇವತೆಗಳಿಂತೊಬ್ಬರೊಬ್ಬರ
ಭಾವಿಸಲು ನೀವುಭಯಮುಂಕಡುಲೇಸನೈದುವಿರಿ ॥ ೧೧

ಇಷ್ಟಭೋಗಂಗಳನು ಯಜ್ಞದಿ
ತುಷ್ಟರಹ ದೇವರು ನಿಮಗೆ ಸಂ
ತುಷ್ಟಿಯಿಂದಲಿ ಕೊಡಲು ಕೊಟ್ಟುದನವರಿಗರ್ಪಿಸದೆ ।
ಕೆಟ್ಟತನದಿಂ ಭೋಗಿಸುತಲಿಹ
ದುಷ್ಟನೀಲೋಕದಲಿ ತಾನು
ತೃಪ್ತದೈವಸ್ವಾಪಹಾರದ ಕಳ್ಳನೆನಿಸುವನು ॥ ೧೨

ಪರಮಯಜ್ಞದ ಶೇಷವನು ತಾ
ವಿರದೆ ಭುಂಜಿಪ ಸಂತರುಗಳೀ
ದುರಿತಬಂಧನದಿಂದ ನೆರೆ ಬಿಡುಗಡೆಯನೈದುವರು ।
ನಿರುತದಿಂದಲೆ ಸ್ವೀಯಕುಕ್ಷಿಂ
ಭರರು ಸ್ವಾರ್ಥದ ತಿಳಿಯದಿರುತಿಹ
ನರಕಿಗಳು ಪಾಪವನೆ ಉಂಬರು ಪಾರ್ಥಕೇಳೆಂದ ॥ ೧೩

ಅನ್ನದಿಂ ಪ್ರಾಣಿಗಳು ಜನಿಸುವ
ರನ್ನವೆಂತುದಯಿಸುವುದೆನೆ ಪ
ರ್ಜನ್ಯನಿಂ ಪರ್ಜನ್ಯತಾನುದಯಿಸುವುದೆಂತೆನಲು ।
ಸನ್ಮತಿಯೆ ಕೇಳ್ಯಜನದಿಂ ಪ
ರ್ಜನ್ಯನುದಿಸುವುದದು ಯಜನಸಂ
ಪನ್ನ ಸತ್ಕರ್ಮದಲಿ ಜನಿಸುಗುಪಾರ್ಥ ಕೇಳೆಂದ ॥ ೧೪

ಇಂತೆನಿಪ ಸತ್ಕರ್ಮವಾಶ್ರುತಿ
ಸಂತತಿಗಳಿಂ ಜನಿಸುವುದು ಶ್ರುತಿ
ಸಂತತಿಗಳಾವರ ಪರಬ್ರಹ್ಮದಲಿ ಜನಿಸುವುವು ।
ಇಂತು ಕಾರಣಪೂರ್ವವನು ನಿ
ಶ್ಚಿಂತವರುಪುವ ಸಕಲಶ್ರುತಿಗಳು
ಸಂತತವು ಯಜ್ಞದಲಿ ನೆಲೆಯಾಗಿಹುವು ಕೇಳೆಂದ ॥ ೧೫

ಈಪರಿಯ ವರ್ತಿಸುವ ಕರ್ಮಕ
ಲಾಪವನು ನೆರೆಬಿಟ್ಟು ಮಾನವ
ರೂಪಿನೊಳು ಸಿಲುಕಿರ್ದು ಮಿಗೆ ವಿಷಯಾಭಿಮುಖನಾಗಿ ।
ವ್ಯಾಪಿಸಿರುವಿಂದ್ರಿಯದೊಡನೆ ತ
ದ್ರೂಪದಲಿ ಕ್ರೀಡಿಸುತಲಿರುತಿಹ
ಪಾಪಿ ಜೀವನ್ಮುಕ್ತನೆನಿಸನು ಪಾರ್ಥ ಕೇಳೆಂದ ॥ ೧೬

ಆವನೊಬ್ಬ ಮಹಾಪುರುಷನೀ
ಜೀವಭಾವವ ಬಿಟ್ಟು ಆತ್ಮನ
ಭಾವಿಸುವನತಿಪ್ರೀತಿಯಿಂ ಪರಮಾತ್ಮತೃಪ್ತಿಯಲಿ ।
ಪಾಪವನು ತನ್ನಲ್ಲಿ ತಾನೇ
ರೂಪಳಿದ ಸಂತೋಷಿ ಯಾತನ
ದಾವ ಪರಿಯಲಿ ಕೂಡಿ ಮಾಡುವ ಕರ್ಮವಿಲ್ಲೆಂದ ॥ ೧೭

ಆ ಮಹಾಪುರುಷಂಗೆ ಕರ್ಮವ
ಪ್ರೇಮದಿಂ ಮಾಡುವದರಿಂ ಬಹ
ಕಾಮಿತದ ಲೇಸಿಲ್ಲ ಮಾಡದೆ ಬಿಟ್ಟುದರಿಂದ ।
ತಾಮಸದ ಕೇಡಿಲ್ಲ ಭೂತ
ಸ್ತೋಮದಲಿ ತಾ ಬಯಸುವರ್ಥದ
ಕಾಮವಾತಂಗಿಲ್ಲ ವೆಲೆಕಲಿಪಾರ್ಥ ಕೇಳೆಂದ ॥ ೧೮

ಎಲೆಧನಂಜಯ ವಿಹಿತಕರ್ಮವ
ಫಲದ ಬಯಕೆಯ ಬಿಟ್ಟು ಮಾಡುವ
ಸಲೆ ಮನುಜನೈದುವನು ಬ್ರಹ್ಮವನದುನಿಮಿತ್ತದಲಿ ।
ಫಲದ ಬಯಕೆಯ ಬಿಟ್ಟು ನಿನ್ನಯ
ಕುಲವಿಹಿತವಹ ಕರ್ಮವನು ನೀ
ನೊಲಿದು ಸಂತತ ಮಾಡುತಿರೆ ಲೇಸಹುದು ನಿನಗೆಂದ ॥ ೧೯

ಕರ್ಮದಿಂ ಜನಕಾದಿಗಳು ಕೇ
ಳ್ನಿರ್ಮಲದ ಸಿದ್ಧಿಯನು ಪಡೆದರು
ದುರ್ಮದವ ನೆರೆಬಿಟ್ಟು ಕರ್ಮವನವರ ಚಂದದಲಿ ।
ಧರ್ಮವೆಂದೇ ಮಾಡು ಅಥವಾ
ಹಮ್ಮುವಿಡಿದಿಹ ಲೋಕಕೋಸುಗ
ಬೊಮ್ಮವನು ನೀನರಿದೊಡಂ ಮಾಡುವುದುಚಿತವೆಂದ ॥ ೨೦

ಆವುದಾವುದನುತ್ತಮರು ನಿ
ತ್ಯಾವಳಿಯೊಳಾಚರಿಪರದನೇ
ತಾವು ಬಿಡದಾಚರಿಸುವರು ಮಾನವರು ಮುದದಿಂದ
ಆವನುತ್ತಮಪುರುಷ ತಾಬಳಿ
ಕಾವಮತದಲಿ ನಡೆಯುತಿಹನದ
ಭಾವಿಸುತ ಮನುಜರುಗಳನು ವರ್ತಿಸುತಲಿಹರೆಂದ ॥ ೨೧

ಎಲೆಧನಂಜಯ ಮೂರುಲೋಕಂ
ಗಳೊಳೆನಗೆ ನೆರೆ ಮಾಡಬೇಡಿದ
ಹಲವುಕ್ರಿಯೆ ತಾನಿಲ್ಲ ಪಡೆಯದವಸ್ತುತಾನಿಲ್ಲ ।
ಬಲವಿನಿಂ ಮುಂದೈದೆ ಬೇಡುವ
ಫಲವು ತಾನಿಲ್ಲಾದೊಡೆಯು ನಾ
ಕುಲವಿಹಿತಕರ್ಮಂಗಳಲಿ ವರ್ತಿಸುತಲಿಹೆನೆಂದ ॥ ೨೨

ಅಲಸದಾನೀಗಖಿಲಕರ್ಮವ
ನೆಲಗೆ ಮಾಡುವೆ ಮಾಡುತಿರುತಿ
ರ್ದಲಸಿದಾಕ್ಷಣ ಬಿಟ್ಟೆನಾದಡೆ ಬಳಿಕ ಮಾನವರು ।
ಹಲವು ಮಾತೇನೆನ್ನ ನೀಕ್ಷಿಸಿ
ಕುಲವಿಹಿತಕರ್ಮವನು ಬಿಡುವರು
ಚಲಿಸಿ ಬಿಡಲವರುಗಳು ನರಕವನೈದದಿರರೆಂದ ॥ ೨೩

ನಿರುತ ಕರ್ಮವ ಮಾಡದೆಯು ತಾ
ನಿರಲು ಈ ಮನುಬರುಗಳೆಲ್ಲರು
ಭರವಸದಿ ನೆರೆ ಕೆಟ್ಟು ಪೋಪರು ಜಾತಿಸಂಕರವ ।
ಇರದೆ ನಾನೇ ಮಾಡಿದವನಹೆ
ನರರನೆಲ್ಲರ ಕರ್ಮದಿಂ ವ್ಯಭಿ
ಚರಿಸಿ ಕೊಂದವನಪ್ಪೆನಾ ಕಲಿಪಾರ್ಥ ಕೇಳೆಂದ ॥ ೨೪

ಅಜ್ಞರೀವರದಾನತಪಗಳ
ಯಜ್ಞಕರ್ಮಂಗಳ ಫಲರವೇ
ದಾಜ್ಞೆಯಿಂ ಬಯಸುತ್ತಮಾಳ್ಪರು ಜ್ಞಾನವುಳ್ಳರು ।
ಪ್ರಜ್ಞೆಯಿಂದಾಫಲವ ಬಯಸದೆ
ಯಜ್ಞಕರ್ಮಂಗಳನು ಮಾಡುವ
ರಜ್ಞಲೋಕದನುಗ್ರಹಾರ್ಥಕೆ ಪಾರ್ಥ ಕೇಳೆಂದ ॥ ೨೫

ಪರಮತತ್ವವ ಬಲ್ಲ ಬುಧರನ
ವರತಕರ್ಮವ ಮಾಡುತಿರುವ
ಜ್ಞರಿಗೆ ಕರ್ಮವ ಬಿಡುವ ಬುದ್ಧಿಯ ಭೇದಮಾರ್ಗವನು ।
ಒರೆಯಲಾಗದು ಕರ್ಮವನು ತಾ
ನಿರುತದಿಂದಾಸಕ್ತಿಯಿಲ್ಲದೆ
ಚರಿಸುತವೆ ಮೂರ್ಖರನು ಕರ್ಮವ ಮಾಡಿಸುವುದೆಂದ ॥ ೨೬

ದುರುಳತನದಭಿಮಾನದಿಂ ಸಂ
ಚರಿಸುವಾತನು ಪ್ರಕೃತಿಯಿಂದಹ
ಪಿರಿದು ಸತ್ವರಜಸ್ತಮಸ್ಸುಗಳೆಂಬ ಗುಣದಿಂದ ।
ಭರದಿ ಮಾಡುವ ಕರ್ಮವೆಲ್ಲವ
ಮರುಳ ತಾನೇ ಮಾಡುತಿಹೆನೆಂ
ದಿರದೆ ಬಗೆವನು ಲೋಕದಲಿ ಕಲಿಪಾರ್ಥ ಕೇಳೆಂದ ॥ ೨೭

ಎಲೆಧನಂಜಯ ಈ ಗುಣಂಗಳ
ಹಲವು ಕರ್ಮಂಗಳ ವಿಭಾಗದ
ನೆಲೆಯ ಬಲ್ಲ ಮಹಾಪುರುಷನೀವಿಷಯವೈದರಲಿ ।
ಒಲವಿನಿಂ ಪಂಚೇಂದ್ರಿಯಂಗಳು
ಸಲೆ ಚರಿಸುತಿಹುವೆಂದು ಹಮ್ಮಿನ
ಬಲೆಯೊಳಗೆ ತಾ ಸಿಲುಕನೈಯೆಲೆಪಾರ್ಥ ಕೇಳೆಂದ ॥ ೨೮

ತಾಮಸದ ಪ್ರಕೃತಿಯಲಿ ಗುಣ ದು
ಷ್ಕಾಮ ಮೂಢರು ತ್ರಿಗುಣ ಕರ್ಮ
ಸ್ತೋಮದಲಿ ಕರ್ತೃತ್ವದಿಂದಾಸಕ್ತರಾಗಿಹರು ।
ಆಮರುಳರನು ವೇದಶಾಸ್ತ್ರದ
ಸೀಮೆಯನು ಬಲ್ಲವರು ಕರ್ಮವ
ನೇಮದಿಂ ಸಲೆಬಿಡಿಸಲಾಗದು ಪಾರ್ಥ ಕೇಳೆಂದ ॥ ೨೯

ಎಲೆಧನಂಜಯ ಸಕಲಕರ್ಮವ
ನೊಲವಿನಿಂದೆನ್ನಲಿ ಸಮರ್ಪಿಸಿ
ಸಲೆ ಪರಮತತ್ವವನರಿವ ಮತಿಯಿಂದ ವಿಷಯದಲಿ ।
ಬಲಿದ ಬಯಕೆಯ ಬಿಟ್ಟು ಮಮತೆಯ
ಗೆಲಿದು ಶೋಕಾದಿಗಳನೈದದೆ
ಕಲಹಕುದ್ಯೋಗವನು ಮಾಡೇಳೆಂದನಸುರಾರಿ ॥ ೩೦

ಆರುಕೆಲರೀಯೆನ್ನ ಮತದಲಿ
ಸಾರಸತ್ಕರ್ಮವನು ಶಾಸ್ತ್ರವಿ
ಚಾರದಿಂದನುಸರಿಸಿ ನೆರೆ ಸದ್ಗತಿಯನೈದುವರು ।
ಬೇರೆಮಾತೇನಿನ್ನು ಮಾಡುವ
ಧೀರರವರನಸೂಯರಾಗಿರೆ
ಘೋರವಹ ಕರ್ಮಂಗಳಿಂ ಬಿಡುಗಡೆಯನೈದುವರು ॥ ೩೧

ಇನ್ನು ನೀಕೇಳಾರು ಕೆಲಬರು
ಎನ್ನಮತವಹ ಕರ್ಮಯೋಗವ
ಭಿನ್ನಹಾದಿಯಸೂಯತನದಿಂ ಭಜಿಸದಿರುತಿಹರು ।
ಧನ್ಯಶಾಸ್ತ್ರಜ್ಞಾನವಿಲ್ಲದೆ
ಬನ್ನಬಡುತಿಹ ಮತಿವಿಹೀನರು
ಮುನ್ನವೇ ನೆರೆ ಕೆಟ್ಟರೆಂದರಿಯೆಂದನಸುರಾರಿ ॥ ೩೨

ತಾನುಸತ್ಜ್ಞಾನದನುಸಂ
ಧಾನವುಳ್ಳವನಾದೊಡೆಯು ಮುಂ
ತಾನು ಮಾಡಿದ ಪ್ರಕೃತಿಗನುಗುಣವಾಗಿ ಚೇಷ್ಟಿಪನು ।
ಆನರರುಗಳು ತಮ್ಮ ಪ್ರಕೃತಿನಿ
ಧಾನದಿಂದಿರುತಿಹರು ಶಾಸ್ತ್ರವಿ
ಧಾನನಿಗ್ರಹವೇನ ಮಾಡುವುದೆಂದನಸುರಾರಿ ॥ ೩೩

ಇಂದ್ರಿಯಂಗಳು ಬಿಡದೆಳೆವ ಪಂ
ಚೇಂದ್ರಿಯಾರ್ಥಂಗಳಲಿ ಮಿಗೆಬಳಿ
ಸಂದು ರಾಗದ್ವೇಷವಿರುತಿಹುವವರಧೀನವನು ।
ಮಂದರಂದದಲೈದಲಾಗದು
ಸಂದ ಯೋಗಾಭ್ಯಾಸಕಿವು ತಾಂ
ಸಂದವೈರಿಗಳಾಗಿಹುವು ಕೇಳೆಂದನಸುರಾರಿ ॥ ೩೪

ತನ್ನ ಧರ್ಮಾ ಚರಣವೇ ತನ
ಗುನ್ನತದ ಲೇಸಾದ ಕಾರಣ
ಪನ್ಯಕೊರತೆಯುದಾದೊಡೆಯು ಕೇಳ್ತನಗದೇ ಲೇಸು ।
ಅನ್ಯಧರ್ಮವು ಕುಲಗೆಡಿಸಿ ನೆರೆ
ಬನ್ನಬಡಿಸುವುದಲ್ಲದೇ ಸಂ
ಪೂರ್ಣನೆನಿಸಿದೊಡಂ ತನಗೆ ಲೇಸಿಲ್ಲ ತಿಳಿಯೆಂದ ॥ ೩೫

ಹರಿಯೆ ಕೇಳೀಪಾಪವನು ನರ
ಭರದಿ ಬಯಸದಿರಲ್ಕೆ ಬಲುಹಿಂ
ದರಸು ಬಿಟ್ಟಿಯ ಮಾಡುವಂದದಲಾರ ಪ್ರೇರಣೆಯಿಂ ।
ಇರದೆ ಮಾಳ್ಪಂ ತನುವ ಪ್ರೇರಿಪ
ಪುರುಷನಾರೈ ಹೇಳು ವೃಷ್ಣಿಗ
ಳರಸ ಕೃಪೆಯಿಂ ಕರುಣಿಸೆಂದನು ಪಾರ್ಥ ಕೈಮುಗಿದು ॥ ೩೬

ಎನಿತನುಂಡುಂ ದಣಿಯದಿಹನೊ
ಬ್ಬನು ಮಹಾಪ್ರಾಪಿಷ್ಠ ನೀಕಾ
ಮನು ಕಣಾ ಈಕ್ರೋಧನೆಂಬವನುಂ ರಜೋಗುಣದಿ ।
ಜನಿಸಿದರು ಪರತತ್ವವಿದ್ಯೆಯೊ
ಳನುಪಮದ ಯೋಗಕ್ಕಿವಂದಿರು
ಘನತರದ ಹಗೆಯಾಗಿಹರು ಕಲಿಪಾರ್ಥ ಕೇಳೆಂದ ॥ ೩೭

ಹೊಗೆಯ ಬಲುಹಿಂದಗ್ನಿ ಕಿಲುಬುರೆ
ನೆಗೆದಿರಲು ದರ್ಪಣವು ಮಾಸಿಂ
ದೊಗೆದ ಗರ್ಭವು ಮುಸುಕಿಕೊಂಡಿರ್ಪಂತೆ ಹೃದಯದಲಿ ।
ನಿಗಮತತ್ವಜ್ಞಾನ ಕಾಮಾ
ದಿಗಳೆನಿಪ ಹಗೆಯಿಂದ ತಿಳಿದರ
ಬಗೆಗೆ ಮುಸುಕಿಸಿಕೊಂಡಿಹುದು ಕೇಳೆಂದನಸುರಾರಿ ॥ ೩೮

ಎಲೆಧನಂಜಯ ತತ್ವವಿದರಿಗೆ
ಹಲವು ಕಾಲ ವಿರೋಧಿಯೆನಿಸುವ
ಕಲಿತವಿಷಯ ಸಮೂಹಸಮಿಧೆಗಳಿಂದ ದಣಿಯದಿಪ ।
ಬಲುಹೆನಿಪ ಕಾಮಾಗ್ನಿಯಿಂ ನೆರೆ
ಸಲೆ ಮುಸುಕಿಕೊಂಡಿಹುದು ತತ್ವದ
ನೆಲೆಯೆನಿಪ ನಿಜರೂಪವಿಂಧನವೆಂದನಸುರಾರಿ ॥ ೩೯

ನೆಗಳಿದಿಂದ್ರಿಯವೀಮನೋಬು
ದ್ಧಿಗಳು ತಾವಿವು ಮುನ್ನ ಘನನಂ
ಬುಗೆಯ ನೆಲೆವನೆ ಯೆನಿಸುತಿಹುದಿವರಿಂದ ಮನ್ಮಥನು ।
ನಿಗಮುಸಿದ್ಧಜ್ಞಾನವನು ತಾ
ನಗಲದೆಯೆ ನೆರೆ ಮುಸುಕಿ ಜೀವರ
ಬೆಗಡುಗೊಳಿಸುತ್ತಿಹನು ಜಗದೊಳಗೆಂದನಸುರಾರಿ ॥ ೪೦

ಅದುನಿಮಿತ್ತ ಜ್ಞಾನಶಾಸ್ತ್ರದ
ಪದವ ಕೆಡಿಸುವ ಕಾಮನೆಂಬೀ
ಮದಮುಖದ ಪಾಪಿಯನು ನೀಜಯಿಸುವರೆ ಮೊದಲಲ್ಲಿ ।
ಒದವಿದಿಂದ್ರಿಯಗಳ ನಿರೋಧಿಸಿ
ಸದಮಲಜ್ಞಾನದಲಿ ಹೆಚ್ಚಿದ
ವಿದಿತವೈರಾಗ್ಯದಲಿವನ ಕೆಡಿಸೆಂದನಸುರಾರಿ ॥ ೪೧

ಇಂದ್ರಿಯಂಗಳು ವಿಷಯದಿಂ ಮಿಗಿ
ಲೆಂದು ನುಡಿವರು ಇಂದ್ರಿಯಗಳ
ಬೃಂದದಿಂ ಮನವಧಿಕ ಮನದಿಂದತ್ಯಧಿಕ ಬುದ್ಧಿ ।
ಇಂದ್ರಿಯುಗಳೀ ವಿಷಯಪಂಚಕ
ದಿಂದ ಮನದಿಂ ಬುದ್ಧಿಯಿಂದಾ
ನಂದಮಯನಾತುಮನಧಿಕ ಕಲಿಪಾರ್ಥಕೇಳೆಂದ ॥ ೪೨

ಈ ಪರಿಯಲಾತ್ಮನನು ಬುದ್ಧಿಯ
ರೂಪಿನಿಂದತ್ಯಧಿಕನೆಂದೇ
ದೀಪಿಸುವ ಶಾಸ್ತ್ರಾರ್ಥದಿಂ ನೆರೆ ತಿಳಿದು ಚಿತ್ತವನು ।
ವ್ಯಾಪಿಸಿದದಂದದಿ ನಿರೋಧಿಸಿ
ನೀ ಪರಮಯತ್ನದಲಸಾಧ್ಯದ
ಪಾಪಿಯಾಗಿಹ ಕಾಮವೆಂಬೀಪಗೆಯ ಜಯಿಸೆಂದ ॥ ೪೩

– ಇಂತು ಕರ್ಮಯೋಗವೆಂಬ ಮೂರನೇ ಅಧ್ಯಾಯ ಸಂಪೂರ್ಣ –

# ನಾಲ್ಕನೇ ಅಧ್ಯಾಯ - ಜ್ಞಾನಯೋಗ

ಸೂಚನೆ ॥ ಪರಮತತ್ವಜ್ಞಾನಯೋಗದ
ಪರಿಯನಾಮುರಹರನು ಪಾರ್ಥಂ
ಗೊರೆದ ಪರಿಯನು ಕೇಳು ಜನಮೇಜಯಮಹೀಪಾಲ ॥

ಒದವಿದೀವರನಿತ್ಯಯೋಗದ
ಪದವ ನಾ ಪೂರ್ವದಲಿ ಪೇಳ್ದೆನು
ಮುದದಲಾಸೂರ್ಯಂಗೆ ಸೂರ್ಯನು ಬಳಿಕ ಮನುವಿಂಗೆ ।
ಇದನು ತಿಳುಹಿದ ತಿಳಿದ ಮನು ಹೇ
ಳಿದನು ತಾನಿಕ್ಷ್ವಾಕುವಿಂಗೀ
ಹದನ ಕೇಳೈಪಾರ್ಥನೀನೆಂದನು ಮುರಧ್ವಂಸಿ ॥ ೧

ಈ ಪರಿಯ ಪಾರಂಪರೆಗಳಿಂ
ದೀಪಿಸುತ್ತುರೆ ಬಂದ ಯೋಗವ
ತಾಪಸೋತ್ತಮರಾಜರುಷಿಗಳು ಬಲ್ಲರೆಲ್ಲವನು !
ಆಪರಮವರಯೋಗವಿಳೆಯೊಳು
ರೂಪಳಿದು ಬಹುಕಾಲದಿಂ ಮಿಗೆ
ಲೋಪವಾಯಿತು ಪಾರ್ಥ ನೀ ಕೇಳೆಂದನಸುರಾರಿ ॥ ೨

ನೀನೆನಗೆ ಸಂಗಡಿಗನೆಂದು ನಿ
ಧಾನದಿಂ ನಿಜಭಕ್ತನೆಂದೇ
ನಾ ನಿನಗೆ ಪೂರ್ವದಲಿ ಸೂರ್ಯಂಗೊರೆದ ಯೋಗವನು ।
ಜ್ಞಾನವುದಯಿಸುವಂತೆ ವೇದವಿ
ಧಾನುಗತದುತ್ತಮರಹಸ್ಯ
ಸ್ಥಾನವನು ತಿಳುಹಿದೆನು ಕೇಳೆಂದನು ಮುರಧ್ವಂಸಿ ॥ ೩

ಬಿನ್ನಹವ ಮಾಡುವೆನು ಹರಿಯೆ
ನಿನ್ನ ಜನ್ಮವು ಬಳಿಕಿನದು ರವಿ
ಮುನ್ನ ತಾ ಜನಿಸಿದನು ಪೂರ್ವದಲಾವ ಪರಿಯಿಂದ ।
ಉನ್ನತದ ಯೋಗವನು ನಿನಗುಪ
ಸನ್ನ ನಾದರ್ಕಂಗೆ ನೀನಿದ
ಮುನ್ನ ಬೋಧಿಸಿದಂದವನು ನಾನರಿವೆನೆಂತೆಂದ ॥ ೪

ಎಲೆಧನಂಜಯ ಎನಗೆ ನಿನಗೆಯು
ಹಲವು ಜನ್ಮಾದಿಗಳು ಹೋದವು
ಹೊಲಬನೆಲ್ಲವ ಬಲ್ಲೆ ನಾನವರಿಯೆಯೈ ನೀನು ।
ಸಲೆ ಜನನ ಮರಣಗಳ ವಿದ್ಯೆಯ
ನೆಲೆ ಸಕಲಭೂತಂಗಳಿಗೆ ನಿ
ರ್ಮಲನಿಯಾಮಕನೆನಿಪ ಪರಮೇಶ್ವರನು ನಾನೆಂದ ॥ ೫

ನಿತ್ಯನಜನು ಸಮಸ್ತ ಭೂತಕೆ
ಕರ್ತನಹ ಈಶ್ವರನು ತಾನೆನಿ
ಸುತ್ತ ಶ್ರುತಿಗಳೊಳಿದ್ದೊಡೆಯು ಕೇಳೆನ್ನ ಪ್ರಕೃತಿಯನು ।
ಸತ್ವದಿಂದಾಶ್ರಯಿಸುತೆನ್ನಯ
ವಿಸ್ತರದ ಗುಣಮಾಯೆಯಿಂ ಜನಿ
ಸುತ್ತಿಹೆನು ಕಲ್ಪದಲಿ ಜನಿಸೆನು ಪಾರ್ಥ ಕೇಳೆಂದ ॥ ೬

ಧರ್ಮಕಾವಾಗಬಹುದು ಹಾನಿಯ
ಧರ್ಮವಾವಾಗುದುಭವಿಸುವುದು
ಕರ್ಮಕಾಲಂಗಳನರಿದು ಬಳಿಕಾಗ ತನ್ನುವನು ।
ನಿರ್ಮಿಸುವೆನವತಾರರೂಪಿಂ
ಧರ್ಮಕೋಸುಗ ಪಾರ್ಥ ತಿಳಿಸೈ
ನಿರ್ಮಲನು ನಾಂ ಜೀವರಂದದಿ ಜನಿಸೆ ಕೇಳೆಂದ ॥ ೭

ಸಜ್ಜನರುಗಳ ಸಲಹಲೋಸುಗ
ದುರ್ಜನರ ನೆರೆ ಮಡುಹಲೋಸುಗ
ಮೂರ್ಜಿತದ ಧರ್ಮಂಗಳನು ನೆಲೆಗೊಳಿಸಲೋಸುಗವು ।
ಕಜ್ಜವೆನಗಿದು ಪ್ರತಿಯುಗಂಗಳ
ಪಜ್ಜೆವಿಡಿದುದಯಿಸುವೆ ಫಲವನು
ವರ್ಜಿಸುತ ಕರ್ಮವನು ಮಾಡುವೆನೆಂದನಸುರಾರಿ ॥ ೮

ಈಪರಿಯಲವತರಿಸಿ ದೆನ್ನಸ್ವ
ರೂಪವನು ವರಜನ್ಮ ಕರ್ಮದ
ರೂಪುಗಳ ಲೇಸಾಗಿ ತಿಳಿದವನೀತನುವ ಬಿಟ್ಟು ।
ಪಾಪದಿಂ ತಾ ಮರಳಿ ಜನಿಸದೆ
ತಾಪಮೂರನು ಗೆಲಿದು ಮಿಗೆ ನಿ
ರ್ಲೇಪನೆನಿಸುವ ನೆನ್ನ ನೈದುವನೆಂದನಸುರಾರಿ ॥ ೯

ಭೀತಿರಾಗದ್ವೇಷವಿಲ್ಲದೆ
ನೀತಿಯಿಂ ನಿಜಭಕ್ತನಾಗಿರು
ತೋತು ನಾನೇ ತಮ್ಮ ನಿಜರೂಪೆಂದು ಭಾವಿಸುವ ।
ಆತುಮಜ್ಞಾನದ ತಪಸ್ಸಿಂ
ಪೂತವಾಗಿಹ ಸಕಲಸುಜನ
ವ್ರಾತವೈದುವುದೆನ್ನೊಳೈಕ್ಯವನೆಂದನಸುರಾರಿ ॥ ೧೦

ಭರದಲಾರಾರಾವ ಪರಿಯಲಿ
ನಿರುತದಿಂ ಭಜಿಸುವರವರನಾ
ಪರಿಯಭೀಷ್ಟವನಿತ್ತು ಸುಖದಿಂ ತುಷ್ಟಿ ಬಡಿಸುವೆನು ।
ನರನೆ ಕೇಳೈ ಮನುಜರುಗಳಾ
ದರದ ಲೆನ್ನಯಪದವನೆಲ್ಲರು
ಓರಿದು ಬಳಿವಿಡಿದಿಹರು ತಿಳಿಯೆಂದನು ಮುರಧ್ವಂಸಿ ॥ ೧೧

ಕರ್ಮದಿಂದೈಹಿಕದಫಲವ ನ
ಹಮ್ಮಮತೆಯಿಂ ಬಯಸುವರುಗಳು
ಕರ್ಮದೇವತೆಗಳನು ಒಲಿದರ್ಚಿಸುವರತಿಮುದದಿ ।
ಧರ್ಮದಿಂದಹ ಫಲವದಾಶ್ರಯ
ಧರ್ಮವಿಡಿದಿಹ ಮನುಜರಿಗೆ ಸ
ತ್ಕರ್ಮದಿಂದೀಭುವನದೊಳು ಸಿದ್ಧಿಪ್ಪುದು ಬೇಗದಲಿ ॥ ೧೨

ನಾಲ್ಕುವರ್ಣದ ಕರ್ಮಗುಣದ ವಿ
ವೇಕದಿಂದ ವಿಭಾಗಸಹಿತೀ
ಲೋಕಗಳ ನಿರ್ಮಿಸಿದೆನೀಲೋಕಂಗಳಿಗೆ ನಾನು ।
ಏಕಕರ್ತೃವೆನಿಸಿದರೆಯು ನಾ
ನೀಕೆಲಸದಲಕರ್ತೃವಾದ ನ
ಶೋಕನೆಂದೇ ತಿಳಿ ನಿಧಾನದೊಳೆಂದನಸುರಾರಿ ॥ ೧೩

ಎನ್ನ ನೀಕರ್ಮಂಗಳೆಂದುಂ
ಬೆನ್ನ ಹತ್ತವು ಎನಗೆ ಕರ್ಮದ
ಸನ್ನಿಹಿತ ಫಲದಲ್ಲಿ ಭೋಗದ ಬಯಕೆ ಯಿಲ್ಲಾಗಿ ।
ಎನ್ನನೀಪರಿ ಯಾವನೊಬ್ಬನು
ತನ್ನ ಮತಿಯಿಂ ಬಲ್ಲನವ ನೆರೆ
ಧನ್ಯನೀಕರ್ಮಂಗಳಿಂ ಬಿಗಿವಡೆಯುಕೇಳೆಂದ ॥ ೧೪

ಇನ್ನು ಕೇಳೈ ಪಾರ್ಥ ಮುನ್ನಿನ
ಧನ್ಯರಾದ ಮುಮುಕ್ಷುಗಳು ನೆರೆ
ಸನ್ನುತರುಗಳಾಗಿ ಕರ್ಮವ ತಿಳಿದು ಮಾಡಿದರು ।
ಮುನ್ನಿನವರುಗಳಿಂದಲಿನ್ನುಂ
ಮುನ್ನಿನವರುಂ ಬಿಡದೆ ಮಾಡಿರು
ಪೂರ್ವದ ಸ್ವಕರ್ಮವನು ನೀನೊಲಿದು ಮಾಡೆಂದ ॥ ೧೫

ಕರ್ಮವಾವುದು ನೋಡೆ ನಿಜದಲ
ಕರ್ಮವಾವುದ ದೆಂತೆನುತ್ತ
ಕರ್ಮವನು ತಿಳಿವಲ್ಲಿ ಮೋಹಿತರಹರು ಕೋವಿದರು ।
ಕರ್ಮವಾವುದನರಿದಮಂಗಳ
ಕರ್ಮಬಂಧವ ಹರಿವೆ ಕೇಳಾ
ಕರ್ಮವನು ಹೇಳುವೆನು ನಿನಗಾನೆಂದನಸುರಾರಿ ॥ ೧೬

ನಿರುತ ಕರ್ಮದ ರೂಪವನು ದು
ಶ್ಚರಿತವಾದ ವಿಕರ್ಮ ರೂಪನು
ಪರಿವಿಡಿಯಲಿ ಯಕರ್ಮ ವಿನಿತರ ರೂಪಭೇದವನು ।
ಪರಿಕಿಸಲು ನೀನರಿಯಬೇಹುದು
ಭರದಿಕರ್ಮದ ಗತಿ ವಿಚಾರಿಸ
ಲರಿದೆನಿಸುತಿಹುದಾಗಿ ನಿನಗದ ನೊರೆವೆ ಕೇಳೆಂದ ॥ ೧೭

ನಿರುಪಮಾತುಮನಲ್ಲಿ ಕರ್ಮವ
ಪರಿಕಿಸದೆ ದೇಹೇಂದ್ರಿಯಂಗಳ
ಉರುತರದ ಕರ್ಮವನು ಕಂಡವನಾವನೊಬ್ಬವನು ।
ನರರೊಳಧಿಕಜ್ಞಾನಿ ಯಾತನೆ
ಪರಮಯೋಗೀಶ್ವರನು ಕರ್ಮವ
ಭರದಲೆಲ್ಲವ ಮಾಡಿದಾತನು ಪಾರ್ಥಕೇಳೆಂದ ॥ ೧೮

ಆವನೊಬ್ಬನು ಸಕಲಕರ್ಮವ
ನಾವಫಲ ದಾಸಕ್ತಿಯಿಲ್ಲದೆ
ಭಾವದಲಿ ನಡೆಸುತ್ತ ವಿಜ್ಞಾನಾಗ್ನಿಭರ್ಜಿತದ ।
ಜೀವಸಂಚಿತಕರ್ಮದಿಂ ದಿಹ
ನಾವಿವೇಕಿಯ ಬುಧರುಗಳು ನೆರೆ
ಭಾವಿಸುವರೈ ಪಂಡಿತೋತ್ತಮನೆಂದು ಲೋಕದಲಿ ॥ ೧೯

ನಿತ್ಯತೃಪ್ತನು ಸಕಲಬಯಕೆಯ
ಚಿತ್ತದಲಿ ಬಿಟ್ಟಿಹ ನಿರಾಶ್ರಯ
ಚಿತ್ತನಾಗಿಹ ಜ್ಞಾನಿ ಸತ್ಕರ್ಮಂಗಳಲಿ ತಾನು ।
ಎತ್ತಲಾ ನುದ್ಯೋಗಿಸಿದೊಡಂ
ಹತ್ತವಾಕರ್ಮದ ಫಲಂಗಳು
ಕರ್ತೃತಾನಲ್ಲೆನಿತು ಕರ್ಮವ ಮಾಡಲವನೆಂದ ॥ ೨೦

ಆಸೆಯನು ನೆರೆಬಿಟ್ಟು ನಿಯತದಿ
ಸೂಸ ದಂತಃಕರಣಯೋಗಾ
ಭ್ಯಾಸಿಯಾಗಿಯೆ ಸಕಲವಿಷಯವ ಬಿಟ್ಟು ಮಾನವನು ।
ಈಶರೀರಕೆ ತಕ್ಕಕರ್ಮವ
ನೇಸು ಮಾಡಿದೊಡಂ ವಿಷಮವಹ
ದೋಷಲೇಪವ ಪಡೆಯ ನವನೆಲೆ ಪಾರ್ಥ ಕೇಳೆಂದ ॥ ೨೧

ಆದನಿತು ಲಾಭದಲಿ ತುಷ್ಟಿಯ
ನೈದಿ ಸಂತೋಷದಲಿ ದ್ವಂದ್ವವ
ನೈದೆ ಸೈರಿಸಿ ಮತ್ಸರವ ನೆರೆಬಿಟ್ಟು ಚಿತ್ತದಲಿ ।
ಆದ ಲಾಭಾಲಾಭದಲಿ ಮಿಗೆ
ಭೇದಹರ್ಷಂಗಳನು ತಾಳದೆ
ವೈದಿಕಕ್ರಿಯೆಮಾಡಿದರೆಯುಂಬದ್ಧ ನಲ್ಲೆಂದ ॥ ೨೨

ಸಂಗವನು ನೆರೆಬಿಟ್ಟುರಾಗದ
ಲಿಂಗವಿಲ್ಲದೆ ಜ್ಞಾನದಲಿ ದೃಢ
ಸಂಗಿಯಾಗಿ ಸುಚಿತ್ತನಾಗಿ ಮಹೇಶ್ವರಾರ್ಪಣಕೆ ।
ಹಿಂಗದನುದಿನ ಕರ್ಮವನು ಮಾ
ಳ್ಪಂಗೆ ಸಂಚಿತಸರ್ವಕರ್ಮವು
ಹಿಂಗಿಹೋಹುದು ಪಾರ್ಥ ನೀ ಕೇಳೆಂದನಸುರಾರಿ ॥ ೨೩

ಬ್ರಹ್ಮರೂಪೆನಿಪಗ್ನಿಯಲಿ ತ
ದ್ಬ್ರಹ್ಮರೂಪಹ ಹವಿಯ ಹೋಮವು
ಬ್ರಹ್ಮರೂಪಹ ಕರ್ತೃವೀಬ್ರಹ್ಮಾರ್ಪಣವ ಕುರಿತು ।
ಬ್ರಹ್ಮಕರ್ಮಸಮಾಧಿಯಿಂದಾ
ಬ್ರಹ್ಮವನು ತಾನೈದುವನು ತ
ದ್ಬ್ರಹ್ಮವಿಂತೀಜಗವು ಯೋಗಿಗೆ ಪಾರ್ಥಕೇಳೆಂದ ॥ ೨೪

ಮತ್ತೆಕೆಲಬರು ಯೋಗಿಗಳು ಯಜಿ
ಸುತ್ತಿಹರು ಘನಸುಗುಣದಿಂದೇ
ವೊತ್ತಮಾರ್ಪಣಮೆನಿಪ ಯಜ್ಞದ ವೈದಿಕಾಗ್ನಿಯಲಿ ।
ಇತ್ತ ನಿರ್ಗುಣಯೋಗಿಗಳು ಯಜಿ
ಸುತ್ತಿಹರು ಬ್ರಹ್ಮಾಗ್ನಿಯಲಿ ಪುರ
ಷೋತ್ತಮನನು ವಿವೇಕಯಜ್ಞದಿ ಪಾರ್ಥ ಕೇಳೆಂದ ॥ ೨೫

ಕೆಲರು ಧ್ಯಾನಸಮಾಧಿಯೆಂಬೀ
ಜ್ವಲನನಲಿ ಶ್ರೋತ್ರಾದಿಗಳಿಗಹ
ಫಲವ ಬೇಳುತ್ತಿರ್ಪರೈ ಕೆಲರಿಂದ್ರಿಯಾಗ್ನಿಯಲಿ ।
ಸುಳಿಯುತಿಹ ಶಬ್ದಾದಿ ವಿಷಯಂ
ಗಳನು ಬೇಳುತ್ತಿಹರು ಪರಿಪರಿ
ಗಳ ವಿಧಾನಂಗಳನು ಹೇಳುವೆನೆಂದನಸುರಾರಿ ॥ ೨೬

ಜ್ಞಾನದಿಂ ದೀಪಿಸುತ ವಿಷಯ
ಧ್ಯಾನವಿಲ್ಲದೆ ಚಿತ್ತನಿಯಮವಿ
ಧಾನ ಯೋಗಾಗ್ನಿಯಲಿ ಕೆಲ ರಭ್ಯಾಸಯೋಗದಲಿ ।
ಈನಿಖಿಲಕರಣೇಂದ್ರಿಯಂಗಳ
ಧೀನಕರ್ಮವ ಪ್ರಾಣಕರ್ಮವ
ಮೌನದಿಂ ದೆಲ್ಲವನು ಬೇಳುವರೆಂದನಸುರಾರಿ ॥ ೨೭

ಶ್ರುತಿಗಳಂ ಪೊಗಳಿಸಿಕೊಳುತ್ತಿಹ
ವ್ರತವನುಳ್ಳ ಯತೀಶ್ವರರು ತ
ತ್ಪ್ರತಿವಿಹಿತಸದ್ದ್ರವ್ಯವೇದಾಧ್ಯಯನಯೋಗತಪ ।
ಸ್ತತ ತತ್ವಜ್ಞಾನರೂಪಿನ
ಕ್ರತುಗಳನು ಮಾಡುತ್ತಿಹರು ಸುಖ
ದತಿಶಯದ ಮೋಕ್ಷವನು ಬಯಸುತ ಪಾರ್ಥ ಕೇಳೆಂದ ॥ ೨೮

ಕೆಲರು ಪ್ರಾಣಾಯಾಮದಲಿ ನಿ
ಶ್ಚಲರೆನಿಸಿಕೊಂಬವರು ಪ್ರಾಣಾ
ನಿಲನಪಾನಾನಿಲವ ರೇಚಕಪೂರಕಂಗಳನು ।
ಕಳೆದು ಕುಂಭಕದಿಂದ ಪ್ರಾಣನ
ಬಲಿದಪಾನಸಮೀರನಲಿ ತಾ
ವೊಲಿದು ಬೇಳ್ವರಪಾನನನು ಬೇಳುವರು ಪ್ರಾಣನಲಿ ॥ ೨೯

ಮತ್ತೆ ನಿಯತಾಹಾರರಾದನಿ
ವೃತ್ತವಿಷಯರು ನಾಗಮುಖ್ಯಮ
ರುತ್ತಗಳ ಬೇಳುವರು ಮುಖ್ಯಪ್ರಾಣನಿಚಯದಲಿ ।
ಉತ್ತಮದ ಯಜ್ಞವನು ಬಲ್ಲವ
ರುತ್ತಮರೆನಿಪ್ಪಲ್ಲರುಂ ವಿ
ಧ್ಯುಕ್ತವಹ ಯಜ್ಞಂಗಳಿಂ ಪಾಪವನು ಕಳೆಯುವರು ॥ ೩೦

ಕುರುಕುಲೋತ್ತಮ ಯಜ್ಞಶೇಷವ
ಹಿರಿದು ಭುಂಜಿಸಿದವರುಗಳು ನೆರೆ
ಪರಮಪದವನು ಪಡೆವ ಯಜ್ಞದ ಫಲವದಿಲ್ಲದಿಹ ।
ನರರುಗಳಿಗಿಹ ಲೋಕವೇ ತಾ
ದೊರೆಕದೆನೆ ಪರಲೋಕವೆಲ್ಲಿಯ
ದುರುಪರಾಕ್ರಮಿ ಪಾರ್ಥ ಕೇಳೆಂದನು ಮುರಧ್ವಂಸಿ ॥ ೩೧

ಈ ಪರಿಯ ಬಹುವಿಧದ ಯಜ್ಞಗ
ಳಾಪರಬ್ರಹ್ಮದಲಿ ಜನಿಸಿ ನಿ
ರೂಪಿಸುವ ವೇದದಮುಖದವಾಕ್ಯದಲಿ ಪೇಳಿಹುವು ।
ಆಪರಿಯ ಕರ್ಮೇಂದ್ರಿಯಾದಿಕ
ಲಾಪದಿಂ ಜನಿಸಿದ ವನೆಲ್ಲವ
ನೀಪರಿಯಲರಿಯಲ್ಕೆ ನೀನೆ ಮುಕ್ತನಹೆ ಯೆಂದ ॥ ೩೨

ಎಲೆಪರಂತಪ ಜ್ಞಾನಯಜ್ಞವು
ಹಲವುದ್ರವ್ಯದ ಯಜ್ಞದಿಂದತಿ
ಸುಲಭ ವುತ್ತಮಲೇಸು ಕೇಳಿನ್ನಖಿಲಶಾಸ್ತ್ರದೊಳು ।
ಹಲವು ಸತ್ಕರ್ಮಂಗಳಿವು ತಾ
ವೆಲೆಗೆ ತತ್ವಜ್ಞಾನದಿಂದಲೆ
ಸಲೆ ಸಮಾಪ್ತಿಯನೈದುವುವು ಕಲಿಪಾರ್ಥ ಕೇಳೆಂದ ॥ ೩೩

ಪರಮತತ್ವ ಜ್ಞಾನವನು ನೀ
ನರಿತು ಕಲಿವೊಡೆ ಜ್ಞಾನಿಗಳ ನತಿ
ಪರಿಚಯವನು ಮಾಡಿ ವಂದಿಸುತವರ ಬೆಸಗೊಳಲು ।
ಹಿರಿದು ತುಷ್ಟಿಯನೈದಿ ಕೃಪೆಯಿಂ
ಕರುಣಿಸುವರದರಿಂದ ನಿನಗಾ
ಪರಮತತ್ವಜ್ಞಾನ ವಹುದೆಂದನು ಮುರಧ್ವಂಸಿ ॥ ೩೪

ಆವುದೊಂದೀತತ್ವವನು ನಿಜ
ಭಾವದಿಂ ನೆರೆತಿಳಿದೆ ಯಾದರೆ
ಜೀವಭಾವದ ಲಜ್ಞತನವನು ಮರಳಿ ನೀನೈದೆ ।
ಆವಿವೇಕದ ಬಲುಹಿನಿಂ ಭೂ
ತಾವಳಿಯ ನಿನ್ನಲ್ಲಿ ಕಂಡೊಡೆ
ಜೀವರುಗಳೆಲ್ಲರನು ಎನ್ನಲಿ ಕಾಂಬೆ ನೀನೆಂದ ॥ ೩೫

ಬಳಿಕ ನೀನು ಸಮಸ್ತಪಾಪಿಗ
ಳೊಳಗಮತಿಕಡುಪಾಪಿ ಯಾಗಿರೆ
ತಿಳಿಯೆ ಕೇಳೈ ಪಾರ್ಥ ನೀನಾಸಕಲಪಾತಕದ ।
ಜಲನಿಧಿಯ ನತ್ಯಂತನಿಜನಿ
ರ್ಮಲದ ತತ್ವಜ್ಞಾನವೆನಿಸುವ
ತೊಳತೊಳಗುತಿಹ ತೆಪ್ಪದಿಂ ದಾಂಟುವೆ ಸುನಿಶ್ಚಯವು ॥ ೩೬

ಅತಿಭಡಾಳಿಸಿದಗ್ನಿ ಶುಷ್ಕ
ಪ್ರತತಿಗಳ ಭಸ್ಮವನು ಮಾಡುವ
ಗತಿಯವೊಲು ಜ್ಞಾನಾಗ್ನಿ ಸಂಚಿತಕರ್ಮವೆಲ್ಲವನು ।
ಹತವಮಾಡುವುದೈ ಧನಂಜಯ
ಕ್ಷಿತಿಯೊಳಗೆ ನೀನದನರಿದು ನಿಜ
ಗತಿಯನೊಲಿವರೆ ಪರಮತತ್ವಜ್ಞಾನಿ ಯಾಗೆಂದ ॥ ೩೭

ಪರಮತತ್ವಜ್ಞಾನದೀಪ್ತಿಗೆ
ಸರಿಯೆನಿಪ ಪಾವನವು ಧರೆಯೊಳು
ಹಿರಿದು ಬೇರೊಂದಿಲ್ಲ ನೋಡಾಜ್ಞಾನಸಿದ್ಧಿಯನು ।
ನಿರುತ ಯೋಗಾಭ್ಯಾಸವುಳ್ಳಾ
ಪುರುಷ ತಾನೇ ಹಲವು ಕಾಲಾಂ
ತರದಿ ತನ್ನಲಿ ಪಡೆವ ನೆಲೆಕಲಿಪಾರ್ಥ ಕೇಳೆಂದ ॥ ೩೮

ಇಂದ್ರಿಯಂಗಳನೊಲಿಸಿ ಭಕ್ತಿಯ
ಲೊಂದಿ ತತ್ವಜ್ಞಾನನಿಷ್ಠೆಗೆ
ನಿಂದವನು ಸುಜ್ಞಾನವನು ಮುದದಿಂದಲೈದುವನು ।
ಸಂದ ಜ್ಞಾನವ ಪಡೆದು ಪರಮಾ
ನಂದಮಯವಹ ಮೋಕ್ಷವನು ಸಾ
ನಂದದಿಂದೈದುವನು ಬೇಗದೊಳೆಂದನಸುರಾರಿ ॥ ೩೯

ತಡೆಯದಜ್ಞನು ಭಕ್ತಿಯಿಲ್ಲದ
ಜಡನು ಸಂದೇಹವನು ಮನದಲಿ
ಬಿಡದೆ ಮಾಡುವ ಮೂಢನುಂ ಕೆಡುವರು ನಿಧಾನಿಸಲು ।
ಬಿಡದೆ ಸಂದೇಹವನು ಮಾಳ್ಪಗೆ
ಪೊಡವಿಯಲಿ ಸುಖವಿಲ್ಲ ಪರದಲಿ
ಪಡೆವ ಸದ್ಗತಿದೊರಕದೈ ಕಲಿಪಾರ್ಥ ಕೇಳೆಂದ ॥ ೪೦

ಎಲೆ ಧನಂಜಯ ಧ್ಯಾನಯೋಗದ
ಬಲದಿ ಕರ್ಪುವ ಬಿಟ್ಟು ಜ್ಞಾನದ
ಬಲುಹಿನಿಂ ದೀಸಕಲಸಂದೇಹಂಗಳಳಿದುಳಿದ ।
ನೆಲೆಗೆ ತತ್ವಜ್ಞಾನದಲಿ ಸಂ
ಚಲನವಿಲ್ಲದ ಆತ್ಮ ನಿಷ್ಠನ
ಹಲವು ಕರ್ಮಂಗಳು ನಿಜದಿ ಬಂಧಿಸವು ಕೇಳೆಂದ ॥ ೪೧

ಅದುನಿಮಿತ್ತದಿ ಪಾರ್ಥ ನಿನ್ನಯ
ಹೃದಯದವಿವೇಕದಲಿ ಜನಿಸಿದ
ಹುದಿದ ಸಂದೇಹವನು ಜ್ಞಾನದೊಳಾದ ಖಂಡೆಯದಿ ।
ಮುದದಿ ಖಂಡಿಸಿ ಕರ್ಮಯೋಗವ
ಹದುಳದಿಂ ಮಾಡೇಳುನೀನೆಂ
ದಿದಿರಲಿಹ ಪಾರ್ಥನನು ನುಡಿದನು ದಾನವಧ್ವಂಸಿ ॥ ೪೨

- ಇಂತು ಜ್ಞಾನಯೋಗವೆಂಬ ನಾಲ್ಕನೇ ಅಧ್ಯಾಯ ಸಂಪೂರ್ಣ -

---

## ಐದನೇ ಅಧ್ಯಾಯ - ಕರ್ಮಸಂನ್ಯಾಸ ಯೋಗ

ಸೂಚನೆ ॥ ಕರ್ಮಲೇಸೋ ದೇವ ನೆರೆ ನಿ
ಷ್ಕರ್ಮ ಲೇಸೋ ಹೇಳೆನಲು ಸ
ತ್ಕರ್ಮವೇ ಸಾಧಕರಿಗುತ್ತಮವೆಂದನಸುರಾರಿ ॥

ಕರ್ಮಸನ್ಯಾಸವನು ಹೊಗಳುತ
ಕರ್ಮಯೋಗವ ಮರಳಿ ಹೊಗಳುವೆ
ಧರ್ಮವೀಯೆರಡರೊಳಗುತ್ತಮ ವಾವುದೊಂದದನು ।
ನಿರ್ಮಲದಿ ನಿರ್ಧರಿಸಿ ಶಾಸ್ತ್ರದ
ಮರ್ಮವನು ಹೇಳೆನಗೆನುತಲಾ
ಧರ್ಮನಂದನನನುಜ ಬೆಸಗೊಂಡನು ಮುರಾಂಕತನ ॥ ೧

ಹರಿ ಕರುಣಿಸಿದಖಿಲಕರ್ಮವ
ಭರದಿ ಬಿಡುವುದು ಫಲವ ಬಿಟ್ಟಾ ।
ದರದಿ ಮಾಡುವುದುಭಯಮತ ಕೈವಲ್ಯಕರವಹುದು ॥
ಎರಡರೊಳು ಕರ್ಮವನು ಬಿಟ್ಟಾ ।
ಚರಿಸುವುದರಿಂ ಕರ್ಮಯೋಗವು ।
ಪರಿಪಿಡಿಯ ಲುತ್ತಮವೆನಿಸುವುದು ಪಾರ್ಥ ಕೇಳೆಂದ ೨

ಎಲೆಧನಂಜಯ ಆವನೊಬ್ಬನು ।
ಹಲವು ಲಾಭಾಲಾಭವನು ತಾ ।
ನೊಲಿಯದೇ ದ್ವೇಷಿಸದೆ ಇಹನವ ನಿತ್ಯಸನ್ಯಾಸಿ ॥
ಸಲೆ ಸಕಲದ್ವಂದ್ವಗಳನು ನೆರೆ
ಗೆಲಿದವನು ಈ ಉಭಯಬಂಧದಿ
ತೊಲಗಿ ಸುಖದಿಂ ನಿಜಪದವನೈದುವನು ಕೇಳೆಂದ ॥ ೩

ಪರಮಸಾಂಖ್ಯವು ಕರ್ಮಯೋಗ ವಿ
ವೆರಡರಲಿ ಭೇದವನು ಕಾಂಬರು
ಮರುಳರಲ್ಲದೆ ಲೋಕದಲಿ ಪಂಡಿತರೆನಿಸುವವರು ।
ಹಿರಿದು ಭೇದವ ನುಡಿಯರಿದರೊಳು
ಭರದಲೊಂದನು ಸಾರಿದವರೀ
ಯೆರಡರಿಂದಹ ಫಲವ ಪಡೆವರು ಪಾರ್ಥ ಕೇಳೆಂದ ॥ ೪

ಪರಮತತ್ವಜ್ಞಾನಮಾರ್ಗದಿ
ಹಿರಿಯರಾವುದಪಡೆದರದನೇ
ವರತಪೋನುಷ್ಠಾನದಿಂದೈದುವರು ಯೋಗಿಗಳು ।
ಹಿರಿದು ಸಾಂಖ್ಯವು ಕರ್ಮಯೋಗವು
ನಿರುತವೊಂದೆಂದಾವನೊಬ್ಬನು
ಭರದಿಕಂಡವನಾತನೇ ಕಂಡವನು ತತ್ವವನು । ೫

ಯಮ ನಿಯಮ ಯೋಗಂಗಳಿಲ್ಲದೆ
ಸಮನಿಸದು ಸನ್ಯಾಸಮಪ್ಪೊಡೆ
ಯಮ ನಿಯಮ ಯೋಗಂಗಳಭ್ಯಾಸವನು ಮುದದಿಂದ ।
ಕ್ರಮವಿಡಿದು ಮಾಡುವ ಮುನಿಪ ಕೇ
ಳಮಲಬ್ರಹ್ಮವ ಬೇಗದಿಂದ ತನು
ಭ್ರಮೆಯಳಿದು ಸುಖದಿಂದಲೈದುವ ಪಾರ್ಥ ಕೇಳೆಂದ ॥ ೬

ಇಂದ್ರಿಯಂಗಳ ಗೆಲಿದು ಮನವನು
ಬಂಧಿಸುತ ವರಯೋಗಯುತನಾ
ನಂದದಿಂದವೆ ನಿಜವನರಿದಾತುಮನು ತಾನಾಗಿ ।
ನಿಂದು ಸರ್ವಾತ್ಮಕನು ತಾನಹೆ
ನೆಂದು ಕರ್ಮವ ಮಾಡಿದೊಡೆ ನಿ
ರ್ಬಂಧಿಸವು ಕರ್ಮಂಗಳವನನು ಪಾರ್ಥ ಕೇಳೆಂದ ॥ ೭

ಪರಮತತ್ವಜ್ಞಾನಿಯಾಗಿಹ
ಪರಮಯೋಗೀಶ್ವರನು ಕಾಣುತ
ಸ್ವರವಕೇಳುತ ಪರಿಮಳಂಗಳ ಕೊಳುತ ಸೋಂಕುತಲೂ।
ಭರದಿ ನಡೆಯುತ ನುಡಿಯುತುರೆ ಕಾ
ಹುರದಲಿಂದ್ರಿಯತತಿ ವಿಷಯದಲಿ
ಚರಿಸುತಿಹುದೆಂದರಿದು ತಾನಪ್ರೀತನಾಗಿಹನು ॥ ೮

ಆವನೊಬ್ಬನು ಬ್ರಹ್ಮದಲಿ ತಾ
ಭಾವದಿಂ ನೆಲೆಗೊಂಡು ಫಲವನು
ಭಾವಿಸದೆ ಕರ್ಮಂಗಳನು ಮಾಡುತ್ತಲಿಹನವನು ।
ತಾವರೆಯ ಎಲೆ ನೀರಿನಿಂ ನೆರೆ
ತೀವಿ ಲೇಪವ ಪಡೆಯದಂದದ
ಲಾವ ಕರ್ಮದಿ ಲೇಪವಡೆಯದೆ ಮುಕ್ತನಾಗಿಹನು ॥ ೯

ಕಾಯದಿಂ ಮನದಿಂದ ಬುದ್ಧಿಯು
ಪಾಯದಿಂ ಬರಿಯಿಂದ್ರಿಯಂಗಳ
ಸಾಯಸಂಗಳಲಾದರೆಯು ಫಲದಾಸೆಯನು ಬಿಟ್ಟು।
ನ್ಯಾಯ ಕರ್ಮವಮಾಡುವರು ನಿ
ರ್ದಾಯದಲಿ ಯೋಗಿಗಳು ನಿರ್ಮಲ
ಕಾಯದಂತಃಕರಣಶುದ್ಧಿಗೆ ಪಾರ್ಥ ಕೇಳೆಂದ ॥ ೧೦

ಕರ್ಮಫಲವನು ಬಿಟ್ಟು ಮಾಡುವ
ಕರ್ಮವನು ವರಯೋಗಸಿದ್ಧನು
ನಿರ್ಮಲದ ಶಾಂತಿಯನು ಪಡೆವನು ಫಲವ ತಾ ಬಯಸಿ ।
ಕರ್ಮವನು ಮಾಡುವನು ಕಾಮದ
ಕರ್ಮದಿಂ ಸಂಸಾರವನು ತಹ
ಕರ್ಮಬಂಧನವಲ್ಲಿ ಕಡೆವನು ಯೋಗವಿರಹಿತನು ॥ ೧೧

ಇಂದ್ರಿಯದ ಜಯವುಳ್ಳವನು ಮನ
ದಿಂದ ಕರ್ಮವ ಬಿಟ್ಟು ತಾನೇ
ಕುಂದದೀ ಯೊಂಬತ್ತು ಬಾಗಿಲ ಪುರದ ದೇಹದಲಿ ।
ನಿಂದು ಸುಖದಿಂದಿರ್ಪ ಜೀವನ
ದೊಂದುಕರ್ಮವ ಮಾಡ ಪರರಿಂ
ದೊಂದುಕರ್ಮವ ಮಾಡಿಸನು ಕಲಿಪಾರ್ಥ ಕೇಳೆಂದ ॥ ೧೨

ಜನಕೆ ಕರ್ತೃತ್ವವನು ಕರ್ಮವ
ನನಿತು ಕರ್ಮದ ಫಲದ ಯೋಗವ
ನನಿತುವನು ತಾ ಮಾಡನೀಶ್ವರನಾವಪರಿಯಿಂದ ।
ದಿನದಿನದ ಲನುವರ್ತಿಸುವುದೆಂ
ತೆನಲನಾದಿ ಯವಿದ್ಯೆಯಿಂ ತಾ
ಘನವೆನಿಪ ಸಂಸ್ಕಾರದಿಂದವೆ ನಡೆಯುತಿಹುದೆಂದ ॥ ೧೩

ಧರಿಸನೀಶ್ವರನಾರಪಾಪವ
ನುರುತರದ ಸುಕೃತವನು ಕೊಳ್ಳನು
ಪರಮತತ್ತ್ವಜ್ಞಾನವಜ್ಞಾನದಲಿ ಮುಸುಕಿಹುದು ॥
ನಿರುತವದರಿಂ ಪ್ರಾಣಿಗಳು ಭವ
ಗರ ಹೊಡೆದು ಸಂಸಾರಚಕ್ರದ
ಪರುಠವಣೆಯಲಿ ಭ್ರಮಿಸುವರು ಕೇಳೆಂದನಸುರಾರಿ ॥ ೧೪

ಆರು ಕೆಲರಜ್ಞತ್ವಜ್ಞಾನದ
ಸಾರದಿಂ ನೆರೆ ಕೆಡಲವರು ನಿ
ರ್ಧಾರ ತತ್ತ್ವಜ್ಞಾನ ತಾ ಪರಮಾತ್ಮರೂಪವನು ।
ಸೂರಿಯನವೊಲು ಬೆಳಗಿ ತೋರಲು
ದಾರರುಗಳೇ ಜಗದೊಳೇನುವ
ಪಾರದೈ ಕೇಳೆಂದನಾ ಪಾರ್ಥಂಗೆ ಮುರವೈರಿ ॥ ೧೫

ಆಪರ ಬ್ರಹ್ಮದಲಿ ಬುದ್ಧಿಯು
ದೀಪಿಸುತಲಿರ್ಪವರು ಮುದದಿಂ
ದಾಪರವೆ ತಾವೆಂಬ ನಿಷ್ಠೆಯನುಳ್ಳಮಾನವರು ।
ಆಪರಿಯ ಸುಜ್ಞಾನದಿಂ ಘನ
ತಾಪವನು ಪರಿಹರಿಸಿ ಪುನರಪಿ
ರೂಪನೈದದೆ ನಿಜವ ತಾವೈದುವವರು ಕೇಳೆಂದ ॥ ೧೬

ವಿದ್ಯವಿನಯಗಳಂದಧಿಕನಾ
ಗಿದ್ದ ದ್ವಿಜನಲಿ ಗೋವಿನಲಿ ನೆರೆ
ಕದ್ದ ಕಳ್ಳನಲಾನೆಯಲಿ ಶುನಕನಲಿ ಶ್ವಪಚನಲಿ ।
ಇದ್ದ ಪರಮಾತುಮನ ನೇಕೋ
ಬುದ್ಧಿಯಲಿ ಸಮನಾಗಿ ಕಾಂಬರು
ಬುದ್ಧಿನೆಲೆಗೊಂಡಿಹ ಪರಮತತ್ವಜ್ಞ ಪಂಡಿತರು ॥ ೧೭

ಆರುಕೆಲಬರು ಮನದಲೀಪರಿ
ಸೇರುವೆಯ ಸಾಮ್ಯದಲಿಹರು ನಿ
ರ್ಧಾರದಿಂ ದೇಹದಲಿ ಗೆಲಿದಿಹರವರು ಭವಭಯವ ।
ವೀರಕೇಳ್ಳೈ ಗೆಲುವ ಪರಿಯನು
ಪಾರಮಾರ್ಥವಿ ದೋಷ ಹೊದ್ದದ
ಸಾರತರ ಬ್ರಹ್ಮದಲಿ ನೆಲೆಯಾಗಿರುವ ಕತದಿಂದ ॥ ೧೮

ಈಪರಿಯ ಬ್ರಹ್ಮದಲಿ ಬುದ್ಧಿಯು
ರೂಪುನೆಲೆಗೊಂಡಜ್ಞನಾಗದೆ
ಯಾಪರಬ್ರಹ್ಮವನರಿದು ಬ್ರಹ್ಮದಲಿ ನೆಲಸಿದವ ।
ರೂಪು ಮೊದಲಹ ವಿಷಯಲಾಭದೆ ತಾ
ಪರಮಹರುಷವನು ಪಡೆಯನು
ತಾಪ ಮೂರೊದಗಿದರೆ ಬೆದರನು ಪಾರ್ಥ ಕೇಳೆಂದ ॥ ೧೯

ಆವವನು ವಿಷಯಂಗಳಲಿ ಸ
ದ್ಭಾವದಿಂದೆರಗದ ಸುಚಿತ್ತದ
ಪಾವನನು ತನ್ನಲ್ಲಿ ಸುಖವಾವುದನು ಪಡೆದಿಹನು ।
ಆವಿಮಲಬ್ರಹ್ಮದಲಿ ಧ್ಯಾನದೆ
ತೀವಿ ಬೆರಸಿದ ಬುದ್ಧಿಯುಳ್ಳವ
ಭಾವಿಸಲು ಕೇಳಾತನಚ್ಯುತ ಪದವನೈದುವನು ॥ ೨೦

ತನುವಿಗಿಂದ್ರಿಯ ವಿಷಯಸಂಗದಿ
ಜನಿತ ಭೋಗಸಮೂಹ ದುಃಖದ
ಘನತೆಗಿದು ಕಾರಣ ಮೊದಲು ಕಡೆ ಯುಂಟೆನಿಪುದಾಗಿ ।
ಅನಿತು ಭೋಗಂಗಳಲಿ ತಾನನು
ಮನದೊಳಾವರಯೋಗಿ ರಮಿಸನು
ಚಿನುಮಯಾತುಮನಾಗಿಹನು ಕೌಂತೇಯ ಕೇಳೆಂದ ॥ ೨೧

ಆವನೊಬ್ಬ ಶರೀರದಿಂದೀ
ಜೀವ ತೊಲಗದ ಮುನ್ನವೀತನು
ಭಾವದಲಿ ಜನಿಸಿರ್ದ್ದ ಕಾಮಕ್ರೋಧದುರಣೆಯನು ।
ಠಾವ ಸೈರಿಸುವೊಡೆ ಸಮರ್ಥನ
ದಾವನಾತನೆ ಯೋಗಯುಕ್ತನು
ಪಾವನನು ಸುಖಿಯಾಗಿಹನು ಕಲಿಪಾರ್ಥ ಕೇಳೆಂದ ॥ ೨೨

ಪ್ರತ್ಯಗಾತ್ಮನ ಲಾವನೊಬ್ಬನು
ನಿತ್ಯ ರಮಿಸುತ ಸುಖದಲಿಹನ
ತ್ಯುತ್ತಮದ ತತ್ಪದದಲಂತರ್ಜ್ಯೋತಿಯುಳ್ಳವನು ।
ಯುಕ್ತನಾತನೆ ಯೋಗಿ ತಾಪರ
ತತ್ವವಾದವ ನಮಳನದ್ವಯ
ನುತ್ತಮನು ಸಾಯುಜ್ಯಮುಕ್ತಿಯ ಪಡೆವ ಕೇಳೆಂದ ॥ ೨೩

ಭೇದಬುದ್ಧಿಯ ಹರಿದವರು ಕ್ಷಯ
ವಾದ ಪಾಪವನುಳ್ಳವರು ವಶ
ವಾದ ಚಿತ್ತವನುಳ್ಳವರು ಸಚರಾಚರಂಗಳಲಿ ।
ಆದರಣೆಯಿಂ ನಿಜವ ಮಾಳ್ಪನಿ
ಜೋದಯದಲಿಹ ತತ್ವನಿಷ್ಠರು
ವೇದವೇದ್ಯರು ಬ್ರಹ್ಮಸಾಯುಜ್ಯವನು ಪಡೆಯುವರು ॥ ೨೫

ಕಾಮಕ್ರೋಧಾದಿಗಳಳಿದ ನಿ
ಸ್ಸೀಮರಿಗೆ ಮೋಕ್ಷಪ್ರಯತ್ನವ
ನೇಮದಿಂ ಮಾಳ್ಪರಿಗೆ ಚಿತ್ತವ ವಶಿಸಬಲ್ಲರಿಗೆ ।
ತಾಮಸದ ಬುದ್ಧಿಯನು ಗೆಲಿದನಿ
ರಾಮಯದ ಯತಿಗಳಿಗೆ ತೋರ್ಪುದು
ಸೀಮೆ ಯಳಿದಿಹ ಬ್ರಹ್ಮಸುಖವೀ ಸಕಲದಿಶೆಗಳಲಿ ೨೬

ಹೊರಗೆಸೆವ ವಿಷಯಂಗಳನು ನೆರೆ
ಜರಿದು ದೃಷ್ಟಿಯನೆರಡು ಹುಬ್ಬುಗ
ಳಿರುವ ಮಧ್ಯದಲಿರಿಸಿ ನಾಸಿಕದೊಳಗೆ ಚರಿಸುತಿಹ ।
ಮೆರೆವ ಪ್ರಾಣಾಪಾನ ವೆರಡನು
ಸೆರೆವಿಡಿದು ಸರಿಮಾಡಿ ಧ್ಯಾನದ
ನಿರಿಗೆಯಿಂದಭ್ಯಾಸ ಯೋಗಿಗಳಿಹರು ಕೇಳೆಂದ ॥ ೨೭

ಮನವ ಬುದ್ಧಿಯನಿಂದ್ರಿಯಂಗಳ
ಘನವಿಕಾರವ ನಿಲಿಸಿ ನಿರ್ಮಲ
ಮನನಶೀಲನು ಮೋಕ್ಷದಲ್ಲಾಸಕ್ತನಾದವನು ।
ತನುವಿನಿಚ್ಛೆಯು ಕ್ರೋಧಭಯವನು
ನೆನೆಯದೆಲ್ಲವ ಬಿಟ್ಟು ನಿಂದಾ
ತನುವಿಡಾಳಿಸೆ ನಿತ್ಯಜೀವನ್ಮುಕ್ತ ಕೇಳೆಂದ ॥ ೨೮

ಸರ್ವಲೋಕಂಗಳಿಗಧಿಪನಹ
ಸರ್ವಯಜ್ಞ ತಪಂಗಳು ನೆರೆ
ಸರ್ವಕಾಲಂಗಳಲಿ ಭೋಗಿಪ ಸರ್ವತೋಮುಖನು ।
ಸರ್ವಭೂತಂಗಳಿಗೆ ಸಖನೆಂ
ದುರ್ವಿಯೊಳಗೆನ್ನನ್ನು ಭಜಿಪನು
ಸರ್ವಥಾ ಮುಕ್ತಿಯನು ಪಡೆವನು ಪಾರ್ಥ ಕೇಳೆಂದ ॥ ೨೮

- ಇಂತು ಕರ್ಮಸನ್ಯಾಸಯೋಗವೆಂಬ ಐದನೇ ಅಧ್ಯಾಯ ಸಂಪೂರ್ಣ -

## ಆರನೇ ಅಧ್ಯಾಯ - ಆತ್ಮಸಂಯಮ ಯೋಗ

ಸೂಚನೆ ॥ ಪರಮಯೋಗಾಭ್ಯಾಸವನು ಸಂ
ಗರದುಭಯಬಲಮಧ್ಯದಲಿ ಮುರ
ಹರನು ಕಾರುಣ್ಯದಲಿ ಕಲಿ ಪಾರ್ಥಂಗೆ ಬೋಧಿಸಿದ ॥

ಆವನೊಬ್ಬನು ಕರ್ಮಫಲವನು
ಭಾವಿಸದೆ ಕರ್ಮವನು ಮಾಡುವ
ನಾವನವ ಸನ್ಯಾಸಿಯೇ ವರಯೋಗಿ ಯೆನಿಸುವನು ।
ಕೇವಲಾಗ್ನಿ ತ್ಯಾಗ ಸತ್ಕ
ರ್ಮಾವಳಿತ್ಯಾಗವನು ಮಾಡದ
ಪಾವನನೆ ಲೋಕದೊಳಗುತ್ತಮನೆಂದನಸುರಾರಿ ॥ ೧

ಎಲೆಧನಂಜಯ ಆವುದೊಂದನು
ತಿಳಿದವರು ಸನ್ಯಾಸವೆಂಬರು
ನೆಲೆಗದನು ವರಯೋಗವೆಂದರಿ ಸಂಗವಿಲ್ಲಾಗಿ ।
ಫಲದ ಸಂಕಲ್ಪವ ಬಿಡದೆ ತಾ
ನೊಲಿದು ಕರ್ಮವ ಮಾಡುವಾತಂ
ಚಲಿಸದೆಂದುಂ ಯೋಗಿಯಾಗನು ಪಾರ್ಥ ಕೇಳೆಂದ ॥ ೨

ಯೋಗವನು ಬಯಸುವ ಮುನಿಗೆ ನಿಗ
ಮಾಗಮದ ಸತ್ಕರ್ಮವೇ ವರ
ಯೋಗಸಿದ್ಧಿಗೆ ಪರಮಕಾರಣವೆನಿಸುವುದು ನೋಡು ।
ಯೋಗಸಿದ್ಧಿಯನೈದಿ ದಾತಂ
ಗಾಗ ಸಮ್ಯಗ್ಜ್ಞಾನ ತನ್ನೊಳ
ಗಾಗಲಾಪರಶಾಂತಿ ಸಾಧನವೆನಿಸುತಿಹುದೆಂದ ॥ ೩

ಭೋಗಿಸುವ ಶಬ್ದಾದಿವಿಷಯದ
ಯೋಗದಲಿ ಸಂಬಂಧಿಸದೆ ಯಾ
ವಾಗಲುಂ ಕಾಮ್ಯಾದಿಕರ್ಮಂಗಳಲಿ ಸಿಲುಕದೆಯೆ ।
ನೀಗಿದವನು ಮನೋರಥವ ನೆರೆ
ಯೋಗಸಿದ್ಧಿಯನುಳ್ಳವನು ತಾ
ನಾಗ ಪರಮಾರೂಢನೆನಿಸುವ ಪಾರ್ಥಕೇಳೆಂದ ॥ ೪

ತನ್ನನುದ್ಧರಿಸುವುದು ತನ್ನಿಂ
ಮುನ್ನ ತನ್ನಂ ಕೆಡಿಸಲಾಗದು
ತನ್ನ ನಿಜವನು ತಾನು ತಿಳಿಯಲು ತನಗೆ ತಾ ಬಂಧು ।
ತನ್ನ ತಾನು ವಿಚಾರಿಸದೆ ಜಡ
ಭಿನ್ನಭಾವದಲಿರಲವಿದ್ಯಾ
ಪನ್ನಪದದಿಂ ತನಗೆ ತಾ ಹಗೆಯಹನು ಕೇಳೆಂದ ॥ ೫

ಆವನಂತಃಕರಣ ತನ್ನವ
ಶಾವಲಂಬನವಾಗಿಹುದು ಕೇ
ಳ್ಬಾವಿಸಲ್ಕವ ತನಗೆ ತಾನೇ ನೆಂಟನಾಗಿಹನು ।
ಈವಿಧದ ಕರ್ಮಗಳಾವನ
ತಾವು ಪ್ರತಿಕೂಲಂಗಳಾಗಿಯೆ
ನೋವಡರಿಪುವು ತನಗೆ ತಾನವ ನಹನು ಹಗೆಯಂತೆ ॥ ೬

ಚಳಿ ಬಿಸಿಲು ಸುಖ ದುಃಖ ಪೂಜಾ
ವಳಿ ತಿರಸ್ಕಾರಂಗಳಲಿ ನೆರೆ
ಗೆಲಿದ ಚಿತ್ತವನುಳ್ಳಯೋಗಿಗೆ ಪರಮಶಾಂತಂಗೆ ।
ತಿಳಿಯೆ ಕೇಳು ಪರಂಪರೆಗಳನು
ಕಳಿದ ಪರಮಾರೂಢಚಿತ್ತಗೆ
ಬೆಳಗು ನಿಜವಪರೋಕ್ಷವಾಗಿಹುದೆಂದನಸುರಾರಿ ॥ ೭

ಸಕಲ ಶಾಸ್ತ್ರಜ್ಞಾನದಿಂ ವರ
ಮುಕುತಿಕರ ಸುಜ್ಞಾನತೃಪ್ತನು
ವಿಕಳನಾಗದೆ ಹೊನ್ನು ಕಲು ಹೆಂಟೆಯಲಿ ಸಮನಾಗಿ ।
ವಿಕರಿಸುವ ಸಕಲೇಂದ್ರಿಯಂಗಳ
ನಿಕರವನು ಗೆದ್ದವನು ಚಲಿಸದ
ಭಕುತನೇ ನಿಜಯುಕುತನೆನಿಸುವ ನೆಂದನಸುರಾರಿ ॥ ೮

ಪ್ರಿಯಸಖನು ಹಗೆ ಬಂಧುಜನಗಳು
ನಿಯತ ಯತಿ ಮಧ್ಯಸ್ಥಸಾತ್ವಿಕ
ನಯವಿದರು ಸಾಧುಗಳು ಪಾಪಿಷ್ಠರುಗಳಲಿ ಸಮದ ।
ಭಯವಳಿದ ನಿಜಬುದ್ಧಿಯಿಂ ನಿ
ಶ್ಚಯದಲೇ ಪರಮಾತುಮನ ನಿ
ರ್ಣಯವ ಕಂಡವನೇ ವಿಶಿಷ್ಟನು ಪಾರ್ಥಕೇಳೆಂದ ॥ ೯

ನಿಯತಚಿತ್ತವನು ನಿಜಪರಿಗ್ರಹ
ಭಯವ ಬಿಟ್ಟಾಸೆಗಳನುಳಿದಿರ
ಭಯವನುಳಿ ನಸಹಾಯನಾ ಗೇಕಾಂತವಾಸವನು ।
ಬಯಸುತಿಹ ವರಯೋಗಿಯಾತ್ಮನ
ನಯದಿ ಪರಮಾತುಮನೊಡನೆ ಸಂ
ತಯುವ ಕಳೆದೇಕತ್ವದಿಂ ಧ್ಯಾನಿಸುವ ಕೇಳೆಂದ ॥ ೧೦

ಶುದ್ಧವಾಗಿಹ ಠಾವಿನಲಿ ನೆರೆ
ಯುದ್ಧವಿಲ್ಲದೆ ಹ್ರಸ್ವವಲ್ಲದೆ
ಹೊದ್ದಿಸುಸ್ಥಿರನಾಗಿ ಚೇಲಾಜಿನಕುಶಗಳಿಂದ ।
ಗದ್ದುಗೆಯ ನಳವಡಿಸಿ ಮಿಗೆ ಕು
ಳ್ಳಿರ್ದು ಪರಮಾತುಮನ ಧ್ಯಾನವ
ಬುದ್ಧಿಯಿಂದಲೆ ಮಾಡುವುದು ಕಲಿಪಾರ್ಥ ಕೇಳೆಂದ ॥ ೧೧

ಅದರ ಲತಿಲೇಸಾಗಿ ತಾ ಮಿಗೆ
ಹದುಳದಿಂ ಕುಳ್ಳಿರ್ದುಚಿತ್ತದೊ
ಳೊದವಿದಖಿಳೇಂದ್ರಿಯದ ವ್ಯಾಪಾರಂಗಳನು ಬಿಟ್ಟು ।
ಮುದದಲಂತಃಕರಣ ಶುದ್ಧಿಯ
ನೊದವಿಸಲಿಕೋಸುಗರ ಯೋಗದ
ಹದನ ನರಿದಾಚರಿಸುವುದು ಕಲಿ ಪಾರ್ಥ ಕೇಳೆಂದ ॥ ೧೨

ಕಾಯ ಶಿರ ಕೊರಳುಗಳನೊಂದೇ
ದಾಯದಲಿ ಸಮನಾಗಿ ಚಲಿಸದೆ
ವಾಯುಧಾರಣೆಯಿಂದ ನೆಟ್ಟನೆ ನಿಲಿಸಿ ದೆಸೆಗಳನು ।
ಹಾಯುತಲಿ ನೋಡುತ್ತಿರದೆ ಕೌಂ
ತೇಯ ತನ್ನಯ ನಾಸಿಕಾಗ್ರವ
ನಾಯತದಲೀಕ್ಷಿಸುತ ಧ್ಯಾನವ ಮಾಡುತಿಹುದೆಂದ ॥ ೧೩

ಹದುಳಿಸಿದ ವರಚಿತ್ತವುಳ್ಳವ
ನೊದವಿದಂಜಿಕೆಯಿಲ್ಲದೇ ಶ್ರುತಿ
ವಿದಿತವಿಮಲ ಬ್ರಹ್ಮಚರ್ಯವ್ರತವ ಚರಿಸುತಿಹ ।
ತುದಿಗೆ ಮನವನು ನಿಲಿಸಿ ಯೆನ್ನಲಿ
ಪುದಿದಚಿತ್ತವನುಳ್ಳ ಯೋಗಿಯು
ಮುದದಲೆನ್ನಲಿ ಲೀನವಾಗಿಹನೆಂದನಸುರಾರಿ ॥ ೧೪

ಈ ಪರಿಯ ನಿಯಮಿಸಿದ ಚಿತ್ತದ
ರೂಪವುಳ್ಳವನಾಗಿ ಬ್ರಹ್ಮದ
ರೂಪನನುದಿನ ಚಿಂತಿಸುತ ವರಯೋಗಿಯಾದವನು ।
ತಾಪವಳಿದೆನ್ನಯ ಪರಮಸುಖ
ರೂಪವನು ಕೂಡಿರ್ದು ನಿಜಚಿ
ದ್ರೂಪವೆನಿಸುವ ಶಾಂತಿಪದವನು ಪಡೆವ ಕೇಳೆಂದ ॥ ೧೫

ಎಲೆಧನಂಜಯ ಯೋಗವೆಂಬುದು
ನೆಲೆಗೆ ಮಿಗಿಲಾಹಾರಿಗೆಯು ನಿ
ಶ್ಚಲಸಿರಾಹಾರಿಗೆಯು ನಿದ್ರಾಶೀಲಗನವರತ ।
ಬಲುಹಿನಿಂ ಜಾಗರವ ಮಾಡುವ
ಛಲಿಗೆ ನಿಜಸುಖದಿಂದ ಯೋಗವು
ಫಲಿಸುವುದು ತಾನಿಲ್ಲ ಕೇಳೆಂದನು ಮುರಧ್ವಂಸಿ ॥ ೧೬

ಸಾರಯುಕ್ತಾಹಾರ ವುಚಿತವಿ
ಹಾರವುಳ್ಳಾತಂಗೆ ನಿರ್ಮಳ
ಚಾರುಕರ್ಮಂಗಳಲಿ ನಿಯತಕ್ರಿಯೆಯನುಳ್ಳಂಗೆ ।
ಭೂರಿನಿದ್ರಾ ಜಾಗರಣೆಗಳ
ಸೇರದಿಹ ಧೀರಂಗೆ ದುಃಖದ
ಬೇರೆ ಕೆಡಿಸುವ ಯೋಗ ದೊರಕುವುದೆಂದನಸುರಾರಿ ॥ ೧೭

ಆವನೊಬ್ಬನ ನಿಯತಚಿತ್ತವು
ಪಾವನಾತುಮನಲ್ಲಿಯೇ ಸ
ದ್ಭಾವದಿಂ ನೆಲಸಿಹುದು ಬಳಿಕ ವಿರಕ್ತನಾದವನು ।
ಈವಿವಿಧವಿಷಯಂಗಳನು ನೆರೆ
ಹೇವದಿಂದಾವಾಗ ಬಿಟ್ಟಿಹ
ಭಾವ ನೆಲೆಗೊಂಡಾಗಲವ ವರಯುಕ್ತನೆನಿಸುವನು ॥ ೧೮

ನಿಯತಚಿತ್ತವನುಳ್ಳವಂಗನು
ನಯದಲಾತ್ಮಧ್ಯಾನವನು ನಿ
ಷ್ಠೆಯದಿ ಮಾಳ್ಪಾತಂಗೆ ವರದೃಷ್ಟಾಂತವೆಂತೆನಲು ।
ಭಯವಳಿದ ಯೋಗಿಗೆ ನಿವಾತಾ
ಲಯದಲಿಹ ದೀವಿಗೆಯವೊಲು ನಿ
ರ್ಭಯದಲಲುಗದೆ ಯಿಹುದದೇ ದೃಷ್ಟಾಂತ ಕೇಳೆಂದ ॥ ೧೯

ಆವವಸ್ಥೆಯಲನುಪಮದ ಯೋ
ಗಾವಲಂಬನದಿಂದ ಚಿತ್ತವು
ತಾವಿನಲಿ ನೆರೆ ನಿಂದು ಲಯವಹುದಾವ ಕಾಲದಲಿ ।
ಭಾವಿಸಲಿಕಾ ತುಮನ ನಾತ್ಮದ
ಲಾವನೊಬ್ಬನು ಕಾಣುತಿಹನಾ
ಪಾವನನು ತನ್ನಲ್ಲಿ ತೃಪ್ತಿಯ ಪಡೆವ ಕೇಳೆಂದ ॥ ೨೦

ಚರಿಸುತಿಹ ಕರಣಂಗಳಿಗೆ ಗೋ
ಚರಿಸದೇ ವರಶುದ್ಧಬುದ್ಧಿಗೆ
ನಿರುತದಿಂ ಗೋಚರಿಸುತಿಹ ನಿಜನಿತ್ಯಸೌಖ್ಯವನು ।
ಹರುಷದಿಂದಾವಾಗ ಪಡೆದಿಹ
ಪರಮತತ್ವಸ್ಥಿತನೆನಿಸಿ ನೆರೆ
ಭರದಿಯೋಗದಿ ಚಲಿಸದಿಹನೈ ಪಾರ್ಥಕೇಳೆಂದ ॥ ೨೧

ಆವಸುಖವನು ಪಡೆದಿಹುದರಿಂ
ಪಾವನೋತ್ತಮ ವನ್ಯಲಾಭವು
ಭಾವಿಸಲ್ಕಿಲ್ಲೆಂದು ನೆಟ್ಟನೆ ಬಗೆದು ಸೌಖ್ಯದಲಿ ।
ಜೀವಿಸುತ್ತಿದ್ದನು ಭವಬಹು
ಭಾವದುಃಖಂಗಳಿಗೆ ತಾ ಸ
ದ್ಭಾವದಿಂ ಸಂಚಲಿಸದಿಹ ನೆಲೆ ಪಾರ್ಥ ಕೇಳೆಂದ ॥ ೨೨

ಸಕಲತಾಪತ್ರಯದ ದುಃಖ
ಪ್ರಕರ ಸೋಂಕಲು ಕೆಡದೆ ತಾನೀ
ನಿಖಿಲಯೋಗದ ಹೆಸರನುಳ್ಳದಿದೆಂದು ನೆರೆ ತಿಳಿದು ।
ಸುಕರದಿಂ ಸಂಗ್ರಹಿಸಿ ಯೋಗವ
ಚಕಿತನಲ್ಲದ ಪುರುಷನೀವರ
ಯುಕುತಿಯಿಂದವೆ ಮಾಡ ಬೇಹುದು ಪಾರ್ಥ ಕೇಳೆಂದ ॥ ೨೩

ಘನಮನೋರಥದಿಂದ ಪುಟ್ಟಿದ
ತನುಧನಾದಿ ಸಮಸ್ತವಿಷಯವ
ನನಿತನುಳುಹದೆ ಬಿಟ್ಟು ವಶವಾಗಿಹ ಮನಸಿನಿಂದ ।
ಅನವರತ ವಿಷಯಂಗಳೊಳಗಿ
ದ್ದನಿತು ಸಕಲೇಂದ್ರಿಯವ ಮುದದಿಂ
ಮುನಿಪನೆಲ್ಲಾ ಕಡೆಗಳಿಂ ನಿಗ್ರಹಿಸಬೇಕೆಂದ ॥ ೨೪

ಮೆಲ್ಲಮೆಲ್ಲನೆ ಧೈರ್ಯದಿಂ ತ
ನ್ನಲ್ಲಿ ನೆಲಸಿದ ಬುದ್ಧಿಯಿಂದವೆ
ನಿಲ್ಲದೇ ಚರಿಸುವ ಮನವ ಪರಮಾತ್ಮನಲಿ ನಿಲಿಸಿ ।
ದುರ್ಲಲಿತವಿಷಯಂಗಳನು ತಾ
ನೊಲ್ಲದೇ ನೆರೆ ತಿರುಗಿ ಯನ್ಯವ
ಸೊಲ್ಲಿಸದೆ ಚಿಂತಿಸದೆ ಸುಖಿಯಾಗಿಹುದು ಕೇಳೆಂದ ॥ ೨೫

ಅನವರತ ಚಂಚಲಿಸುವಸ್ಥಿರ
ವೆನಿಸುವಾವಾವಿಧದ ವಿಷಯದ
ಘನತೆಯಲಿ ನೆಲಸಿಹುದೊ ತತ್ತದ್ವಿಷಯದಿಂ ತೆಗೆದು ।
ಮನವನತಿ ವೈರಾಗ್ಯದಿಂದಾ
ತ್ಮನಲಿ ವಶನು ಮಾಡಲದರಿಂ
ಜನಿಸುವುದು ಪರಶಾಂತಿ ಕೇಳೆಂದನು ಮುರಧ್ವಂಸಿ ॥ ೨೬

ಪರಮಶಾಂತಿಯು ದೊರಕಿದಂತಃ
ಕರಣವುಳ್ಳಾತನ ರಜೋಗುಣ
ಹರಿದು ಪೋದಾತನನು ಪಾಪಂಗಳು ತೊಲಗಿ ಬಳಿಕ ।
ಪರಮ ತಾನಾಗಿದ್ದ ಯೋಗಿಯು
ಹಿರಿದು ಸುಖ ಸಾರುವುದು ಮುದದಿಂ
ಪರಿಭಯಂಕರ ಕೇಳು ನೀನೆಂದನು ಮುರಧ್ವಂಸಿ ॥ ೨೭

ಈಪರಿಯಲನವರತ ಚಿತ್ತವ
ನಾಪರಮಯೋಗದಲಿರಿಸಿ ನಿ
ಷ್ಪಾಪನುತ್ತಮಯೋಗಿ ನಿತ್ಯಾನಂದಮಯವೆನಿಪ ।
ಆಪರಬ್ರಹ್ಮಾಪರೋಕ್ಷದಿ
ತಾಪ ಮೂರನು ಗೆಲಿದು ನಿಜದಿಂ
ತಾ ಪಡೆವ ಸುರುತರದ ಸುಖವನು ಪಾರ್ಥಕೇಳೆಂದ ॥ ೨೮

ಪರಮಯೋಗಿಭ್ಯಾಸದಂತಃ
ಕರಣವುಳ್ಳವನಾಗಿ ಸಚರಾ
ಚರದಲಿಹ ಪರಬೊಮ್ಮವೊಂದೆಂದರಿದ ವರಯೋಗಿ ।
ನಿರುತದಿಂ ದೀಸಕಲಭೂತವ
ನಿರದೆ ತನ್ನಲಿ ಕಾಂಬ ತನ್ನನು
ಪಿರಿದು ಭೂತಂಗಳಲಿ ಕಾಂಬನು ಪಾರ್ಥ ಕೇಳೆಂದ ೨೯

ಆವನೊಬ್ಬನು ಸರ್ವಭೂತದ
ಠಾವಿನಲಿ ಯೆನ್ನನು ನಿರೀಕ್ಷಿಪ
ದೇವ ಮನುಜೋರಗರುಗಳನೆನ್ನಲ್ಲಿ ಕಾಣುವನು ।
ಅವನಾತಂಗಾನು ಕೆಡದಿಹೆ
ಭಾವಿಸಲು ಕೇಳಾತ ನೆನಗಿ
ನ್ನಾವ ಪರಿಯಲಿ ಕೆಡುವನಲ್ಲೆಲೆ ಪಾರ್ಥ ಕೇಳೆಂದ ॥ ೩೦

ಆವನೊಬ್ಬನು ಸರ್ವಭೂತದ
ಜೀವನಾತುಮ ನೊಬ್ಬನೆಂದೇ
ಭಾವದಿಂದೆನ್ನನೆ ಭಜಿಸುತಿಹ ನಾಪರಮಯೋಗಿ ।
ಆವ ಪರಿಯಲಿ ವರ್ತಿಸುತಲುಪ
ಜೀವಿಸಲು ಮೆನ್ನಲ್ಲಿ ತಾ ನಿಜ
ಭಾವದಿಂ ವರ್ತಿಸುತಿಹನು ಕಲಿಪಾರ್ಥ ಕೇಳೆಂದ ॥ ೩೧

ಘನತರದ ಸುಖದುಃಖ ತನ್ನಯ
ತನುಮನಂಗಳ ತಾಗುವಂದದ
ಅನಿತು ಭೂತಂಗಳನು ಸೋಂಕುವುದೆಂದು ತಾ ತಿಳಿದು ।
ಜನಕೆ ದುಃಖಂಗಳನು ಮಾಡದೆ
ಚಿನುಮಯಾತ್ಮಜ್ಞಾನಿಯಾದವ ।
ಮುನಿಗಳೊಳಗತ್ಯಧಿಕ ನೆನ್ನಭಿಮತವು ಕೇಳೆಂದ ॥ ೩೨

ಮಧುರಿಪುವೆ ಮುದದಿಂದ ಚಿತ್ತದ
ಲೊದವಿ ತೋರುವ ಸಮತೆಯೆಂಬೀ
ವಿದಿತಯೋಗವ ಕರುಣಿಸಿದೆ ನೀನಂತದರಲಾನು ।
ಹದುಳದಿಂದಿಹಗತಿಯ ಕಾಣೆನು
ಮೊದಲಲೀಮನ ಚಲಿಸುತಿಹುದಾ
ಪದನ ನೀನೇ ಬಲ್ಲೆ ಚಿತ್ತೈಸೆಂದನಾ ಪಾರ್ಥ ॥ ೩೩

ಕಾಡುವುದು ಬಲಿದಿಹುದ ನಿಜದಲಿ
ಮಾಡಬಾರದು ಚಲಿಸುತಿಹುದತಿ
ಗಾಢಗರ್ವಿತವಾಗಿಹುದು ಮನ ವದು ನಿಮಿತ್ತದಲಿ ।
ಓಡುತಿಹ ವಾಯುವಿನವೋಲ
ಲ್ಲಾಡುತಿಹ ಮನವನು ನಿರೋಧವ
ಮಾಡಲಸದಳವೆಂದು ಬಗೆವೆನು ಕೃಷ್ಣ ಕೇಳೆಂದ ॥ ೩೪

ಎಲೆಧನಂಜಯ ಮನವು ನೆರೆ ಚಂ
ಚಲಿಸುವುದು ಸಂದೇಹವಿಲ್ಲದೆ
ಚಲಿತಮಾನಸಜನರು ನಿಗ್ರಹಿಸಲಿಕೆ ತಾನರಿದು ।
ನೆಲೆಗೆ ನೀನರಿ ಯೋಗಸೇವಾ
ಬಲದಿ ಘನವೈರಾಗ್ಯದಿಂ ಚಂ
ಚಲಿಪಮನವ ನಿರೋಧಿಸಲು ಬಹು ದೆಂದನಸುರಾರಿ ॥ ೩೫

ಮನವಿಕಾರವನಿಸಲರಿಯದ
ತನುವಿಕಾರದ ಮನುಜನಿಂಮುಂ
ದನುಪಮದ ವರಯೋಗ ಪಡೆಯಲು ಬಾರದಿದು ಸಿದ್ದ ।
ಮನವ ವಶವನು ಮಾಡಿದವನಿಂ
ವಿನುತಯೋಗವುಪಾಯದಿಂ ನೆ
ಟ್ಟನೆ ಸುಸಾಧವದೆನಿಸುವುದು ತಾನೆನ್ನ ಮತವೆಂದ ॥ ೩೬

ಅಯತಿ ಯೋಗಾಭ್ಯಾಸದಿಂ ನಿ
ಶ್ಚಯದಿ ಚಲಿಸಿದ ಮನವನುಳ್ಳವ
ನಯದಿ ಯೋಗದ ಭಕ್ತಿಯುಳ್ಳವ ಯೋಗಸಿದ್ಧಿಯನು ।
ನಿಯಮದಿಂ ತಾ ಪಡೆಯದೇ ನಿ
ರ್ಭಯದಲೈದುವನಾವ ಗತಿಯಂ
ಪ್ರಿಯದಿ ಕರುಣಿಸು ಕೃಷ್ಣನೀನೆನಗೆಂದನಾಪಾರ್ಥ ॥ ೩೭

ಎಲೆಜನಾರ್ದನ ಬ್ರಹ್ಮಯೋಗದ
ಹೊಲಬನರಿಯದೆ ಕರ್ಮವನು ತಾ
ನೊಲಿದು ಬಿಟ್ಟುದರಿಂದಲುಭಯಭ್ರಷ್ಟನಾದವನು ।
ಹಲವುಪರಿಯಿಂ ಹರಿವ ಮೇಘದ
ವೊಲು ಕೆಡುವನೋ ಸದ್ಗತಿಯ ತಾ
ನೆಲಗೆ ಪಡೆವನೊ ಕೃಷ್ಣ ಕೃಪೆಮಾಡೆಂದನಾಪಾರ್ಥ ॥ ೩೮

ಎನಿತು ಸಂಶಯವೆನ್ನ ಮನದಲಿ
ಜನಿಸಿಹುದು ನಿಶ್ಶೇಷವಾಗಿಯೆ
ಅನಿತುವನು ಪರಿಹರಿಸಬೇಹುದು ಶಕ್ತ ನೀನಾಗಿ ।
ಘನತರದ ಸಂಶಯವ ಕೆಡಿಸುವೊ
ಡನಘ ನಿನ್ನಿಂದನ್ಯರಿಲ್ಲಲೆ
ಯೆನಗೆ ಕೃಪೆಮಾಡೆಂದು ನುಡಿದನು ಪಾರ್ಥ ಕೈಮುಗಿದು ॥ ೩೯

ತಂದೆ ಕೇಳ್ಳೈ ಪಾರ್ಥಭಕ್ತಿಯೊ
ಳೊಂದಿ ಯೋಗಭ್ರಷ್ಟನಾದವ
ಗೆಂದಿಗೂ ಕೇಡಿಲ್ಲ ವಿಹಪರಗಳಲಿ ಮಂಗಳವ ।
ನಿಂದು ಮಾಡಿದ ನರನು ದುಃಖವ
ನೆಂದಿಗೂ ತಾ ಪಡೆಯನೈ ಕುರು
ನಂದನನೆ ತಿಳಿಯೆಂದನಾಮುರವೈರಿ ಕರುಣದಲಿ ॥ ೪೦

ಯೋಗಮಾರ್ಗ ಭ್ರಷ್ಟನಾದವ
ನಾಗಲುರುಪುಣ್ಯವನು ಮಾಡಿದ
ಭೋಗಿಗಳ ಲೋಕವನು ಗಡೆದವ ನಿತ್ಯವಾಗಿಹುದ ।
ಭೋಗಿಸುತ ಪಲಕಾಲಮಿರ್ದಾದ
ನೀಗಿ ಶುಚಿಗಳ ಶ್ರೀಯನುಳ್ಳನು
ರಾಗಿಗಳ ಮನೆಯಲ್ಲಿ ಜನಿಸುವ ಪಾರ್ಥಕೇಳೆಂದ ॥ ೪೧

ಅಲ್ಲದಿರ್ದೊಡೆ ತತ್ವವಿದ್ಯೆಯ
ಬಲ್ಲಯೋಗೇಶ್ವರರ ವರಕುಲ
ದಲ್ಲಿ ಜನಿಸುವ ಲೋಕದಲಿ ನೋಡೀಪ್ರಕಾರದಲಿ ।
ಸಲ್ಲಲಿತವಹ ಯೋಗಿಗಳ ಕುಲ
ದಲ್ಲಿ ಜನಿಸುವ ಪುಣ್ಯತಾನತಿ
ದುರ್ಲಭವಲಾ ಪಾರ್ಥ ಕೇಳೆಂದನು ಮುರಧ್ವಂಸಿ ॥ ೪೨

ಅದರಲುದಯಿಸಿ ಪೂರ್ವದೇಹದ
ಲೊದವಿಕೊಂಡಿಹ ಬುದ್ಧಿಯೋಗದ
ಪದದ ಸಂಬಂಧವನು ಪಡೆವನು ಪಡೆದನಂತರದಿ ।
ವಿದಿತಮಂ ವರಮೋಕ್ಷ ಸೌಖ್ಯದ
ಪದವೆನಿಸುತಿಹ ಯೋಗಸಿದ್ಧಿಗೆ
ಮುದದಿ ಮಗುಳುದ್ಯೋಗಿಸುವ ನೆಲೆಪಾರ್ಥ ಕೇಳೆಂದ ॥ ೪೩

ತನ್ನ ತಾ ಮರೆದಿರ್ದೊಡೆಯು ತಾ
ಮುನ್ನಮಾಡಿದ ಯೋಗವಾಸನೆ
ಯನ್ನಕೆಳಸದೆ ಮರಳಿ ತನ್ನಭಿಮುಖವ ಮಾಡುವುದು ।
ಉನ್ನತಜ್ಞಾನೇಚ್ಛೆಯಿಂ ಸಂ
ಪನ್ನಜಿಜ್ಞಾಸದಲಿ ವೇದದ
ಧನ್ಯಫಲದಿಂ ದಧಿಕಫಲವನು ಪಡೆವ ಕೇಳೆಂದ ॥ ೪೪

ಅತಿಭರದಿ ಯತ್ನವನು ಮಾಡುತ
ಸತತಯೋಗಾಭ್ಯಾಸಿಯಾಗಿಹ
ಮತಿಯುತನು ಪಾಪಂಗಳಂ ನಿರ್ಲೇಪತಾನಾಗಿ ।
ಯತಿ ಹಲವು ಜನ್ಮಂಗಳಗಲಿಸಂ
ತತ ಮಹಾವಾಕ್ಯಾರ್ಥದಿಂ ನಿ
ಶ್ಚಿತನು ಪರವಹ ಗತಿಯನೈದುವ ಪಾರ್ಥ ಕೇಳೆಂದ ॥ ೪೫

ಎಲೆಧನಂಜಯ ಯೋಗಿ ಕರ್ಮದ
ಫಲವಬಯಸುವರಿಂದಲಧಿಕನು
ಸಲೆ ತಪಸ್ವಿಗಳಿಂದಲಧಿಕನು ಕಾಲವನು ಬಲ್ಲ ।
ಹಲವು ಜ್ಞಾನಿಗಳಿಂದಲಧಿಕನು
ನೆಲೆಗೆ ತಾನದುಕಾರಣದಲೆಲೆ
ಫಲುಗುಣನೆ ವರಯೋಗಿ ಯಾಗೆಂದನು ಮುರಧ್ವಂಸಿ ॥ ೪೬

ಆವನೊಬ್ಬನು ಭಕ್ತಿಯಿಂ ನೆರೆ
ಪಾವನನು ತಾನಾಗಿ ಯೆನ್ನಲಿ
ಭಾವ ಭೇದವನುಳಿದು ಮನದಿಂದೆನ್ನನನವರತ ।
ಸೇವಿಸುತಲಿರ್ಪವನು ಸರ್ವಗು
ಣಾವಳಿಯ ಯೋಗಿಗಳೊಳುತ್ತಮ
ಪಾವನನು ತಾನೆಂಬುದೆನ್ನಭಿಮತವು ಕೇಳೆಂದ ॥ ೪೭

- ಇಂತು ಆತ್ಮಸಂಯಮವೆಂಬ ಆರನೇ ಅಧ್ಯಾಯ ಸಂಪೂರ್ಣ -

## ಏಳನೇ ಅಧ್ಯಾಯ - ಜ್ಞಾನವಿಜ್ಞಾನ ಯೋಗ

ಸೂಚನೆ ॥ ಪರಮನಲಿ ಮೂಲಪ್ರಕೃತಿಯಂ
ಕುರಿಸಿ ತತ್ವದಿ ಬೆರಸಿ ಜೀವನ
ಪರವೆನಿಸಿದಂದವನು ಹರಿ ಪಾರ್ಥಂಗೆ ಕರುಣಿಸಿದ ॥

ಎಲೆಧನಂಜಯ ಎನ್ನಲೇ ನಿ
ಶ್ಚಲದ ಮನವುಳ್ಳವನೆನಿಸಿ ನಿ
ರ್ಮಲದಲೆನ್ನಯ ಪದವ ಬಿಡದಾಶ್ರೈಸಿ ಯೋಗವನು ।
ಒಲಿದುಮಾಡುತ್ತಿರಲು ಸಂಶಯ
ತೊಲಗಿ ಯೆನ್ನನು ಪೂರ್ಣನನು ನೀ
ನೊಲವಿನಿಂದೆಂತರಿವೆ ಕೇಳದನೆಂದನಸುರಾರಿ ॥ ೧

ಆವುದನು ನೀನರಿಯುತಿಹೆ ಮಗು
ಳಾವುದದರಿಂದನ್ಯವೆನಿಸುವ
ಪಾವನದ ಶಾಸ್ತ್ರಗಳಂ ನೀನರಿಯಬೇಡದನು ।
ಆವಲೋಕದೊಳಿಲ್ಲೆನಿಪುದಂ
ತಾವಿವೇಕಜ್ಞಾನವನು ಶಾ
ಸ್ತ್ರಾವಲಂಬನದಿಂದ ಲಧಿಕವನೊರೆವೆ ಕೇಳೆಂದ ॥ ೨

ಮನುಜರೊಳು ಲಕ್ಷದೊಳಗೊಬ್ಬನು
ತನಗೆ ಮೋಕ್ಷೋಪಾಯಕೆನ್ನನು
ನೆನೆಯಲುದ್ಯೋಗಿಸುವನಿಂತೀಲಕ್ಷ ಹಲಬರೊಳು ।
ಜನುಮಯಾತುಮ ನೆನಿಸುವೆನ್ನನು
ಘನಸುಕೃತ ಸಂಪನ್ನನೆನಿಸುವ
ಮುನಿಜನೊಬ್ಬನು ನಿಶ್ಚಯಾರ್ಥದಲರಿವ ಕೇಳೆಂದ ॥ ೩

ಎನ್ನಯೋಗದ ಮಾಯೆ ತಾನೇ
ಭಿನ್ನವಾಗಿಹುದೆಂತೆನೆಲು ಸಂ
ಪನ್ನಧರೆ ಜಲ ವನಲ ಮಾರುತ ನಭ ಮನೋಬುದ್ಧಿ ।
ಉನ್ನತದಹಂಕಾರವೀಪರಿ
ತನ್ನಲೆಂಟಾಗಿಹುದು ಗುಣಸಂ
ಪನ್ನದಿಂ ಮೆರೆವುದು ಚರಾಚರನಾಮರೂಪದಲಿ ॥ ೪

ಈಪರಿಯಲೆಂಟಾಗಿ ತೋರುವ
ರೂಪಿನಪರಪ್ರಕೃತಿಯಿದರಿಂ
ದೀಪಿಸುತ ಬೇರೆನಿಸಿ ತೋರುಗು ಜೀವರೂಪದಲಿ ।
ಆಪರಪ್ರಕೃತಿಯೆ ಕಣಾತ
ದ್ರೂಪದಿಂದೀಸಕಲಜಗವನು
ವ್ಯಾಪಿಸಿಯೆ ನೆರೆ ಧರಿಸಿಹುದು ಕಲಿ ಪಾರ್ಥ ಕೇಳೆಂದ ॥ ೫

ಈಸಕಲಸಚರಾಚರಕ್ಕೆಯು
ತಾ ಸಸಿನೆಯೀ ಯೆರಡುಪ್ರಕೃತಿಯೆ
ಲೇಸು ಕಾರಣವೆಂದು ನಿರ್ಧರಿಸುವುದೆಲಗೆ ನೀನು ।
ಈಸಮಸ್ತಜಗಕ್ಕೆ ಜನನನಿ
ವಾಸವದರಿಂ ಮೇಲೆ ಬಳಿಕ ವಿ
ನಾಶಕಾರಣವಾಗಿಹೆನು ಕಲಿಪಾರ್ಥ ಕೇಳೆಂದ ॥ ೬

ಎಲೆಧನಂಜಯ ಎನ್ನದೆಸೆಯಿಂ
ನೆಲೆಗೆ ಬೇರೊಂದಧಿಕವಿಲ್ಲತಿ
ಸುಲಲಿತದ ವರಸೂತ್ರದಲಿ ಮಣಿನಿಕರದಂದದಲಿ ।
ಚಲವೆನಿಸುವ ಗುಣಂಗಳಿಂದೀ
ಹಲವು ಜಗವೆನ್ನಲ್ಲಿಪರಿವೆಡಿ
ಯಲಿ ನೆಲಸಿಮೆರೆಯುತ್ತಿಹುದು ಕಲಿ ಪಾರ್ಥ ಕೇಳೆಂದ ॥ ೭

ಉದಕದಲಿ ರಸ ರವಿಶಶಿಗಳಲಿ
ಸದಮಲಪ್ರಭೆಸಕಲಶ್ರುತಿಗಳ
ಮೊದಲೊಳೋಂಕಾರಸ್ವರೂಪನು ಗಗನದಲಿ ಶಬ್ದ ।
ಒದವಿದೀಮನುಜರೊಳು ಪೌರುಷ
ಪದವಿ ತಾನಾಗಿಹೆನು ಕುಂತೀ
ಸುದತಿಯಾತ್ಮಜ ಕೇಳು ಸರ್ವಾತ್ಮಕನು ನಾನೆಂದ ॥ ೮

ಭೂಮಿಯಲಿ ಪಾವನದ ಪರಿಮಳ
ವಾಮಹಾಗ್ನಿಯೊಳಮಲತೇಜವು
ಈಮನುಜರೊಳಗಖಿಲಪ್ರಾಣಿಗಳೊಳಗೆ ಜೀವನವು ।
ಆಮಹಾಮುನಿಗಳಲಿ ತಪಸಿನ
ಸೀಮೆ ನಾನಾಗಿಹೆನು ಕೇಳೆಲೆ
ಭೂಮಿಪಾಲರೊಳಧಿಕ ಪಾಂಡುಕುಮಾರ ನೀನೆಂದ ॥ ೯

ಎಲೆ ಧನಂಜಯ ಬುದ್ಧಿವಂತರು
ಗಳಿಗೆ ಜ್ಞಾನದ ಬುದ್ಧಿಯಾಗಿಹೆ
ಸಲೆ ಮಹಾತೇಜಸ್ವಿಗಳಲಿಹ ತೇಜವಾಗಿಹೆನು ।
ನೆಲೆಗೆ ನಾನೇ ಸಕಲ ಭೂತಂ
ಗಳಿಗೆ ಜನನಕೆ ನಿತ್ಯವಾದ
ಸ್ಥಖಿತಕಾರಣರೂಪನೆಂದರಿ ಯೆಂದನಸುರಾರಿ ॥ ೧೦

ಕಾಮರಾಗಾದಿಗಳಿಳಿದ ನಿ
ಸ್ಸೀಮ ಬಲವಾಗಿಹೆನು ಕೇಳು
ದ್ದಾಮ ಬಲವಂತರಿಗೆ ನಾನು ಸಮಸ್ತಭೂತದಲಿ ।
ನೇಮಿಸುವ ಧರ್ಮಂಗಳಿಗೆ ತಾ
ಭೂಮಿಯೊಳಗೆ ವಿರುದ್ಧವಲ್ಲದ
ಕಾಮ ನಾನೆಂದೆನಿಸುವೆನು ಕಲಿ ಪಾರ್ಥ ಕೇಳೆಂದ ॥ ೧೧

ಸತ್ವರಜತಮವೆನಿಪ ಗುಣದಲಿ
ಹತ್ತಿತೋರ್ಪುದದಾವ ಲೋಕವು
ನಿತ್ಯನಹ ನನ್ನಿಂದಲೇ ಕೇಳವು ನಿರಂತರವು ।
ಸತ್ತು ಹುಟ್ಟುವುದೆಂದು ತಿಳಿನಾ
ಹತ್ತೆನದರ ಲವೆಲ್ಲವೆನ್ನಲಿ
ಹತ್ತಿಮೆರೆಯುತ್ತಿಹುವು ತಾವೆಂದನು ಮುರಧ್ವಂಸಿ ॥ ೧೨

ಹೇಳಿದೀ ಗುಣ ಮೂರರಲಿ ನೆರೆ
ಮೇಳವಿಸುವೀಮೂರುತೆರನಹ
ಕಾಳುಬುದ್ಧಿಯ ಭೇದದಿಂ ದೀಸಕಲಜನಮಿರದೆ ।
ಖೂಳತನದಿಂ ಮೆರೆದು ಪರಮಕೃ
ಪಾಳು ನಿರುಪಮ ನಿತ್ಯ ನೀಶ್ವರ
ಪಾಲಕನು ನಾನೆಂದು ತಿಳಿಯದೆ ಕೆಡುತಲಿಹುದೆಂದ ॥ ೧೩

ಎನ್ನಯೀಶ್ವರಭಾವವನು ಸಂ
ಪನ್ನವಾಗಿಯೆ ಹೊದ್ದಿಕೊಂಡಿಹ
ಭಿನ್ನತ್ರಿಗುಣಾತ್ಮಕದಿ ತೋರ್ಪಿ ಮಾಯೆ ಮನುಜರಿಗೆ ।
ಮುನ್ನದಾಟಲು ಬಾರದಿರುತಿಹು
ದೆನ್ನ ಸೇವಕರಾರು ಕೆಲಬರು
ಧನ್ಯರುಗಳೀ ಮಾಯೆಯನು ದಾಂಟುವರು ಕೇಳೆಂದ ॥ ೧೪

ಮೂಢರುಗಳವಿವೇಕಿಗಳು ನೆರೆ
ಗಾಢಗರ್ವಿತರುಗಳು ಮಾಯಾ
ಪ್ರೌಢಿಯಿಂ ನೆರೆ ಕೆಟ್ಟ ತತ್ವಜ್ಞಾನಬಾಹಿರರು ।
ಕೂಡದೆನ್ನೊಳಗಸುರಭಾವದ
ಪಾಡನಾಶ್ರಯಿಸಿದ ನರಾಧಮ
ನಾಟಕರು ನರಕದಲಿ ಕೆಡೆವರು ಪಾರ್ಥ ಕೇಳೆಂದ ॥ ೧೫

ನಾಕುತೆರದವರೆನ್ನ ಭಜಿಪ ವಿ
ವೇಕಿಗಳು ಸುಕೃತಿಗಳಿದಾರೆನೆ
ಲೋಕದೊಳು ಸಂಸಾರಸಕಲವ್ಯಾಧಿಪೀಡಿತನು ।
ತಾಕಿರಿದನರಿವವನು ಅರ್ಥಾ
ನೀಕವನು ಬಯಸುವನು ತತ್ತ್ವವಿ
ವೇಕವುಳ್ಳ ಮಹಾತ್ಮನಿನಿಬರು ಪಾರ್ಥ ಕೇಳೆಂದ ॥ ೧೬

ಅವರು ನಾಲ್ವರೊಳುತ್ತಮದ ಯೋ
ಗವನು ಮಾಡುವನೊಂದೆ ಮನದಿಂ
ಕವಲುಪೋಗದ ಭಕ್ತಿತತ್ತ್ವಜ್ಞಾನಿಯೆಂದೆನಿಪ ।
ಅವನಧಿಕನೆಂದೆನಿಪನದರಿಂ
ದವಗೆ ನಾಂಪ್ರಿಯನಹೆನೆನಗೆ ದಿಟ
ಕವನತಿಪ್ರಿಯನೆನಿಸುವನು ಕಲಿ ಪಾರ್ಥ ಕೇಳೆಂದ ॥ ೧೭

ಸಲಲಿತವರಯೋಗಯುಕ್ತರು
ನಿಲ್ಲದೆನ್ನನೆ ಪರಮಗತಿಯೆಂ
ದೆಲ್ಲಿಯುಂ ಬಿಡದೊಂದಿ ಯೇಕೀಭಾವಯುತರಾದ ।
ಎಲ್ಲರುತ್ತಮರಾದೊಡಂ
ತವ ರೆಲ್ಲರೊಳಗುಂ ಜ್ಞಾನಿ ನಾನೆಂ
ಬಲ್ಲಿ ಸಂಶಯವಿಲ್ಲ ಮತವಿದು ಪಾರ್ಥ ಕೇಳೆಂದ ॥ ೧೮

ಹಲವು ಜನ್ಮಂಗಳಕಡೆಯ ನಿ
ರ್ಮಲದ ಜನ್ಮದ ಲೆನ್ನನೈದುವ
ನೊಲಿದು ತತ್ತ್ವಜ್ಞಾನಿ ಸಕಲಚರಾಚರಂಗಳನು ।
ನೆಲೆಗೆ ಹರಿಯುಂದೇ ತಿಳಿವನಿ
ಶ್ಚಲನೆನಿಪ ವರಯೋಗಿ ಜಗದೊಳು
ಹಲವು ಮಾತೇನೈ ಸುದುರ್ಲಭನೆಂದನಸುರಾರಿ ॥ ೧೯

ತನ್ನ ಪ್ರಕೃತಿಯಧೀನರಾಗಿಹ
ಭಿನ್ನಮಾನವರುಗಳು ಹಲವಾ
ದುನ್ನತದ ವಿಷಯಂಗಳಿಂ ಪ್ರಜ್ಞಾನವಳಿದವರು ।
ಮುನ್ನಭೋಗಾಸಕ್ತಿಯಿಂ ಸಂ
ಪನ್ನನಿಯಮಂಗಳ ಪಿಡಿದುಬಳಿ
ಕನ್ಯದೇವತೆಗಳನು ಭಜಿಸುವ ರೆಂದನಸುರಾರಿ ॥ ೨೦

ಆವನಾವನು ಭಕ್ತಿಯಿಂದಾ
ವಾವ ಮೂರ್ತಿಯ ಭೇದದಲಿ ನೆರೆ
ಭಾವದಿಂ ತಾ ಭಜಿಸಲಿಚ್ಛಯಿಸುವನು ನಿಯಮದಲಿ ।
ಸೇವೆಯನು ಮಾಳ್ಪವಗೆ ನಾನದ
ನಾವ ಪರಿಯಿಂ ಚಲಿಸದೇ ಸಂ
ಭಾವಿಸುವ ಭಕ್ತಿಯನು ಕೊಡುವೆನು ಪಾರ್ಥ ಕೇಳೆಂದ ॥ ೨೧

ಬಳಿಕ ಕೇಳಾನಿತ್ಯ ಭಕ್ತಿಯ
ಬಲುಹುವಿಡಿದಾನರನು ದೇವತೆ
ಗಳನು ತಾ ಪೂಜಿಸಲೆಳಸಿ ಪೂಜಿಸಿದ ಗುಣದಿಂದ ।
ತಳುವದಾದೇವತೆಯ ರೂಪಿಂ
ತಿಳಿಯಲುತ್ತಮಕಾಮಭೋಗಂ
ಗಳನು ನಾಂ ಕೊಡಲವನು ಪಡೆವನು ಪಾರ್ಥ ಕೇಳೆಂದ ॥ ೨೨

ಕೆಡುವುದೈ ಕೇಳಲ್ಪಮತಿಯಲಿ
ಪಡೆದವರಫಲಸಿದ್ಧಿ ದೇವರ
ಗಡಣವನು ಭಜಿಸಿದವರಾದೇವತೆಯನೈದುವರು ।
ಜಡಮತಿಗಳಂತಿರಲಿ ಯೆನ್ನನು
ಬಿಡದೆ ಭಜಿಸುವ ಭಕ್ತಿಯುಕ್ತರು
ತಡೆಯದೆನ್ನಯ ಪದವನೈದುವರೆಂದನಸುರಾರಿ ॥ ೨೩

ಎನ್ನ ಸರ್ವೋತ್ತಮವೆನಿಪ ಸಂ
ಪನ್ನನಿತ್ಯ ಪರಸ್ವರೂಪವ
ಭಿನ್ನಮಾಯೆಯ ವಶದಲರಿಯದ ಮರುಳುಮಾನವರು ।
ಸನ್ನಿಹಿತಕರಣಂಗಳಿಗೆ ತಾ
ಮುನ್ನ ಗೋಚರವಾಗದೆನ್ನನು
ಭಿನ್ನಮಾನವನೆಂದು ಬಗೆವರು ಪಾರ್ಥ ಕೇಳೆಂದ ॥ ೨೪

ಸ್ಫುರಿಸಿ ತೋರುವ ಯೋಗಮಾಯಾ
ವರಣದಿಂ ದಾವರಿಸಿಕೊಂಡಿಹ
ಪರಮನಾಗಿದ್ದಾನು ತೋರೆನು ಸಕಲಮನುಜರಿಗೆ ।
ಅರದವಿದ್ಯಾಶರಧಿ ಮೆರೆದಿಹ
ಮರುಳುಜಗ ವಜನವ್ಯಯತ್ರೀ
ಪರನು ತಾನೆಂದೆನ್ನನರಿಯರು ಪಾರ್ಥ ಕೇಳೆಂದ ॥ ೨೫

ಬಲ್ಲೆ ನಾನೀಹಿಂದೆ ಹೋದವ
ನೆಲ್ಲವನು ವರ್ತಿಸುತಲಿರ್ಪುದ
ಬಲ್ಲೆ ಮುಂದುದಯಿಸುವ ಸಚರಾಚರಸಮೂಹವನು ।
ಬಲ್ಲೆನೆನ್ನನು ಪಾರ್ಥ ಕೇಳ್ಳೈ
ಬಲ್ಲವನು ಜಗದೊಳಗೆತಾನತಿ
ದುರ್ಲಭನು ನಿರ್ಧರಿಸಬಲ್ಲವನಾವ ನಿಲ್ಲೆಂದ ॥ ೨೬

ಎಲೆಪರಂತಪ ಸಕಲಜಗ ತಾ
ನೆಲೆಗೆ ಸೃಷ್ಟಿಯ ಕಾಲದಲ್ಲಿಯೆ
ಬಲಿದ ರಾಗದ್ವೇಷದಿಂದವೆ ಜನಿಸಿ ತೋರುತಿಹ ।
ಹೊಳೆಯುತಿಹ ವಿಷಯಂಗಳಲಿ ನೆಲ
ನೆಲಸಿದೀಸುಖದುಃಖಭ್ರಾಂತಿಯ
ಹೊಲಬನರಿಯದೆ ಭ್ರಮಿಸುತಿರುತಿಹ ದೆಂದಸುರಾರಿ ॥ ೨೭

ಸಾರತರವಹ ಪುಣ್ಯಕರ್ಮದು
ದಾರರಾಗಿರ್ಪವರು ಕೆಲಬರು
ಘೋರತರವಹ ಪಾಪಕರ್ಮವು ನಷ್ಟವಾದವರು ।
ಕ್ರೂರಸುಖದುಃಖಾದಿಬಂಧವಿ
ಕಾರದಿಂ ನಿರ್ಮುಕ್ತರಾಗುರು
ಧೀರಸುವ್ರತ ರೆನ್ನಭಜಿಸುವ ರೆಂದನಸುರಾರಿ ॥ ೨೮

ಜರೆ ಮರಣಭಯ ಹಿಂಗಲೋಸುಗ
ನರರೊಳುತ್ತಮರಾರು ಕೆಲಬರು
ಪರಮಭಕ್ತಿಯೊಳೆನ್ನಸಾರಿದು ಸರ್ವಭಾವದಲಿ ।
ಭರದಿ ಭಜಿಸುವರವರು ನೋಡಾ
ಪರಮತತ್ವವ ನಖಿಳಕರ್ಮವ
ನಿರುತವಧ್ಯಾತ್ಮವನು ತಿಳಿವರು ಪಾರ್ಥ ಕೇಳೆಂದ ॥ ೨೯

ಅರಿವ ರಾನಧಿಭೂತನಹೆನೆಂ
ದರಿವ ರಾನಧಿದೈವನಹೆನೆಂ
ದರಿವ ರಾನಧಿಯಜ್ಞನಹೆನೆಂದವರು ಕೆಲಕೆಲರು ।
ಅರಿದು ಭಜಿಸಲು ಮರಣಕಾಲದಿ
ಮರೆಯದೆನ್ನನು ಯೋಗಬಲದಿಂ
ದುರೆ ಮನವ ಪಿಡಿದೆನ್ನ ನೆನೆವರು ಪಾರ್ಥಕೇಳೆಂದ ॥ ೩೦

- ಇಂತು ಜ್ಞಾನವಿಜ್ಞಾನಯೋಗವೆಂಬ ಏಳನೇ ಅಧ್ಯಾಯ ಸಂಪೂರ್ಣ -

## ಎಂಟನೇ ಅಧ್ಯಾಯ - ಅಕ್ಷರ ಪರಬ್ರಹ್ಮಯೋಗ

ಸೂಚನೆ ॥ ಬ್ರಹ್ಮಮೊದಲಾದೇಳುಪ್ರಶ್ನೆಯ
ಮರ್ಮವನು ಕಲಿಪಾರ್ಥ ಕೇಳಲು
ನಿರ್ಮಳದಿ ಬೋಧಿಸಿದ ಹರಿ ಧಾರಣೆಯ ಯೋಗವನು ॥

ಪರಮಪುರುಷೋತ್ತಮನೆ ಕೃಪೆಯಲಿ
ಕರುಣಿಸೈ ಪರಬೊಮ್ಮವಾವುದು
ನಿರುತದಿಂ ದಧ್ಯಾತ್ಮವಾವುದು ಕರ್ಮವೆಂತಿಹುದು ।
ಪರಿವಿಡಿಯಲಧಿ ಭೂತವಾವುದು
ಹರಿಯೆ ಪೇಳಧಿದೈವವೆಂತಿಹು
ದೊರೆವುದಿದ ನೆನಗೆಂದು ಬಿನ್ನಹಮಾಡಿದನು ಪಾರ್ಥ ॥ ೧

ಮಧುರಿಪುವೆ ನೀ ಹೇಳಿದೀದೇ
ಹದೊಳು ತಾನಧಿಯಜ್ಞವೆಂಬುದು
ವಿದಿತವಾಗೆಂತಿಹುದು ಕರುಣಿಸು ಮರಣಕಾಲದಲಿ ।
ಮುದದಲತಿನಿಯಮಿಸಿದ ಚಿತ್ತದ
ವಿದುಗಳಿಂ ನೀನೆನಿಸಿಕೊಂಬಾ
ಪದನಃಪ್ಲಿವ ತಿಳುಹಬೇಕೆನಗೆಂದನಾಪಾರ್ಥ ॥ ೨

ಪಾರ್ಥ ಕೇಳ್ಕೇಡಿಲ್ಲದಿಹ ತ
ತ್ವಾರ್ಥವೇ ಪರಬೊಮ್ಮವದು ದೇ
ಹಾರ್ಥವಾದನುಭವವು ತಾನಧ್ಯಾತ್ಮವೆನಿಸುವುದು ।
ಸ್ವಾರ್ಥದಿಂ ಪ್ರಾಣಿಗಳ ಜನ್ಮದ
ಲರ್ಥಿಯಿಂ ಹೆಚ್ಚುಗೆಯ ಮಾಡುವ
ಕೀರ್ತಿತಾನುಷ್ಠಾನವದು ಸತ್ಕರ್ಮವೆನಿಸುವುದು ॥ ೩

ಕೇಡನುಳ್ಳ ಪದಾರ್ಥವೇ ತಾ
ನೋಡಲಂತಧಿಭೂತವೆನಿಸುಗು
ಕೂಡೆ ಯಂತರ್ಯಾಮಿ ತಾನಧಿದೈವವೆನಿಸುವನು ।
ನಾಡ ಮಾತೇ ನೀತನುವಿನಲಿ
ಕೇಡನುಳಿದಧಿಯಜ್ಞವಾಗಿಹೆ
ಗಾಢದೇಹವ ಧರಿಸಿದರೊಳುತ್ತಮನೆ ಕೇಳೆಂದ ॥ ೪

ಆವನೊಬ್ಬನು ಮರಣಕಾಲದೊ
ಳಾವಪರಿಯಿಂ ದೆನ್ನ ನೆರೆ ತಾ
ಭಾವಿಸುತ ದೇಹವನು ಬಿಟ್ಟು ಪರೇತನೆನಿಸುವನು ॥
ಭೂವಲಯದೊಳ ಗಾತನೆನ್ನಯ
ಪಾವನದ ಸಾಯುಜ್ಯವನು ಸ
ದ್ಭಾವದಿಂ ಪಡೆವಲ್ಲಿ ಸಂಶಯವಿಲ್ಲಕೇಳೆಂದ ॥ ೫

ಮರಣಕಾಲದಲಾವುದನು ಸಂ
ಸ್ಮರಿಸುತಲಿ ನರರೀಶರೀರವ
ನಿರುತದಿಂ ಪರಿಹರಿಸುತಿಹರಾವಸ್ತುರೂಪವನು ।
ಭರದಲೈದುವರೆಂತೆನಲು ತಾ
ವಿರದೆ ವಸ್ತುವ ನೆನೆದ ಕತದಿಂ
ಪರಮತತ್ವವ ನೆನೆವುದದರಿಂ ಪಾರ್ಥ ಕೇಳೆಂದ ॥ ೬

ಅದುನಿಮಿತ್ತನವರತಮೆನ್ನನು
ಹದುಳದಿಂ ನೆನೆ ನಿನ್ನಧರ್ಮದ
ಕದನವನು ನೆರೆಮಾಡು ಮನಬುದ್ಧಿಗಳನೆನ್ನಲ್ಲಿ ।
ವಿದಿತದಿಂ ದರ್ಪಿಸಲಿಕೆನ್ನನು
ಮುದದಲೈದುವೆ ಪರಮಸುಖದಿಂ
ದಿನಕೆ ಸಂಶಯವಿಲ್ಲ ಕೇಳೆಂದನು ಮುರಧ್ವಂಸಿ ॥ ೭

ಹೊಲಬುಗೆಡದಭ್ಯಾಸಯೋಗದಿ
ಕೆಲಬಲಕೆ ಹರಿಯದ ಸುಚಿತ್ತದಿ
ನಲಿದು ಪುರುಷೋತ್ತಮನ ಪದವನು ನೆನೆಯುತಿಹ ಯೋಗಿ ।
ನಲವಿನಿಂ ದಾಪರಮಪುರುಷನ
ನೆಲೆಯನರಿ ದಾತನಪದವನತಿ
ಸುಲಭದಿಂ ಧೈದುವನು ನಿಜವಿದು ಪಾರ್ಥ ಕೇಳೆಂದ ॥ ೮

ಆವನತಿಸರ್ವಜ್ಞ ಶಾಶ್ವತ
ಪಾವನನು ಸರ್ವಕೆ ನಿಯಾಮಕ
ಭಾವರಹಿತನಚಿಂತ್ಯ ಸೂರಿಯಕೋಟಿಸನ್ನಿಭನು ।
ಜೀವ ತಾಮಸಗುಣವಿದೂರನು
ದೇವನಣುವಿಂಗಣು ಜಗಕೆ ಸ
ದ್ಭಾವಕರ್ತನು ಪರಮನೆಂದೀಪರಿ ನೆನೆವುದೆಂದ ॥ ೯

ಮರಣಕಾಲದಲೆನ್ನ ಭಕ್ತಿಯ
ಧರಿಸಿ ನಿಶ್ಚಲಮನದಿ ಯೋಗದ
ಭರದಿ ಚಲಿಸುವ ಪ್ರಾಣನನು ಭ್ರೂಮಧ್ಯದಲಿ ನಿಲಿಸಿ ।
ಧರಿಸಿ ಪರಮಾತ್ಮನನು ಮನಸಂ
ಚರಿಸದಂತಿರೆ ನೆನೆವ ಪುರುಷನು
ನಿರುತದಿಂ ಪರಮಾತು ಮನಸ್ಯೈದುವನು ಕೇಳೆಂದ ॥ ೧೦

ವೇದವಾದಿಗಳಾವುದೊಂದನ
ನಾದಿಯಕ್ಷರವೆಂದು ಪೇಳ್ವರು
ಪೋದ ರಾಗವನುಳ್ಳಯತಿಗಳು ಪೋಗುವರಾವುದನು ।
ಮೇದಿನಿಯೊಳಾವುದನು ಸಾಧಿಸ
ಲಾದರಿಸುವರು ಬ್ರಹ್ಮಚರಿಯವ
ಬೋಧಿಸುವೆನಾಪದವ ಸಂಕ್ಷೇಪದಲಿ ನಿನಗೆಂದ ॥ ೧೧

ಇಂದ್ರಿಯಂಗಳ ನಿಲಿಸಿ ಮನವನು
ತಂದು ಹೃದಯಾಕಾಶದಲಿ ಬಲು
ಹಿಂದಿರಿಸಿ ಯೋಗದಲಿ ತನ್ನಯ ಪ್ರಾಣವಾಯುವನು ।
ಸಂದ ಮೂರ್ಧದೊಳಿರಿಸಿ ಧಾರಣೆ
ಯೆಂದೆನಿಪ ಯೋಗವನು ಮಾಡಲು
ಕುಂದದಾನಂದವನು ಪಡೆವನು ಪಾರ್ಥ ಕೇಳೆಂದ ॥ ೧೨

ಪ್ರಣವದೊಂದಕ್ಷರದಿ ವೇದ್ಯವ
ನೆಣಿಸಿ ಜಪಿಸುತಲೆನ್ನ ನಿಜವನು
ಪ್ರಣವದರ್ಥವಿಚಾರದಿಂ ದನವರತ ಭಾವಿಸುತ ।
ತೃಣದವೋಲ್ದೇಹವನು ಬಿಟ್ಟಾ
ಕ್ಷಣದೊಳಾಪರಬೊಮ್ಮವನು ವೆಂ
ಠಣಿಸುವನು ಕಲಿಪಾರ್ಥ ಕೇಳೆಂದನು ಮುರಧ್ವಂಸಿ ॥ ೧೩

ಎಲೆಧನಂಜಯ ಆವನೊಬ್ಬನು
ಚಲಿಸದಿರ್ಪೇಕಾಗ್ರಚಿತ್ತದಿ
ನೆಲೆಗೆ ತಾನನವರತ ನೆನೆಯುತ್ತಿಹನು ಮತ್ಪದವ ।
ಫಲವ ಬಯಸದೆ ನಿತ್ಯದೊಳು ನಿ
ರ್ಮಲನೆನಿಸುವಾಯುಕ್ತಯೋಗಿಗೆ
ಸುಲಭ ನಾನಾಗಿಹೆ ನಿಧಾನವಿದೆಂದನಸುರಾರಿ ॥ ೧೪

ಪರಮಯೋಗಿಗಳೆನ್ನನೈದಿದ
ಹಿರಿಯ ರುತ್ತಮಪದದಲಿರುವರು
ಮರಳಿ ದುಃಖಾಲಯ ವನಿತ್ಯವೆನಿಪ್ಪ ಜನ್ಮದಲಿ ।
ತಿರುಗರನುಪಮ ನಿತ್ಯನಿರ್ಮಳ
ತುರಿಯಪರಮಾನಂದಸುಖಸಾ
ಗರದೊಳಿರುತಿಹರೆನ್ನ ಭಜಿಸುವ ರೆಂದನಸುರಾರಿ ॥ ೧೫

ಫಲುಗುಣನೆ ಕಮಲಜನು ಮೊದಲಾ
ಗುಳಿದ ಲೋಕಂಗಳನು ಪಡೆದವ
ರಿಳೆಗೆ ಪುನರಪಿ ಮರಳುವರು ಫಲದಾಸೆಯುಳ್ಳವರು ।
ನೆಲೆಯ ಕೇಳ್ಳೈ ಯೆನ್ನನೈದಿದ
ಸುಲಭರುಗಳಿಗೆ ಮರಳಿ ಜನ್ಮದ
ಹೊಲಬು ತಾ ದಿಟಕಿಲ್ಲವೆಂದನು ದಾನವಧ್ವಂಸಿ ॥ ೧೬

ಆರು ಕೆಲಬರು ಚತುರಯುಗವದು
ಸಾರತರದಿಂದೊಮ್ಮೆ ಸಾಸಿರ
ಬಾರಿ ತಿರುಗಲು ಕಮಲಜನ ಹಗ ಲಾಪರಿಯ ರಾತ್ರೆ ।
ವೀರ ಕೇಳೀಪರಿಯ ಕಾಲದ
ಕಾರಿಯವ ನೆರೆ ಬಲ್ಲ ಹಿರಿಯರ
ಪಾರದಿವರಾತ್ರೆಗಳ ಬಲ್ಲವರೆನಿಪರವರೆಂದ ॥ ೧೭

ಮೊದಲಲಿಲ್ಲದ ಸುರನರಾದಿಗ
ಳುದಿಸುವರು ಕಮಲಜನ ದಿವಸವು
ಮೊದಲುಗೊಳಲು ಜಗಂಗಳಾಗವ್ಯಕ್ತತತ್ವದಲಿ ।
ಅದುಭುತದ ಗುಣರಾತ್ರೆ ತಾ ಮುಂ
ದೊದಗುತಿರ ಲಾಸಕಲಸುರನರ
ಸದನಸಹಿತಡಗುವುದು ಕೇಳವ್ಯಕ್ತದೊಳು ಮರಳಿ ॥ ೧೮

ಈಪರಿಯಲುದಯಿಸಿದ ಪ್ರಾಣಿಗ
ಳಾಪಿತಾಮಹನಿರುಳು ಸಲುವುದು
ಪಾಪಪುಣ್ಯದಮಿತ್ರದಿಂದವೆ ಕಮಲಜನ ಹಗಲು ।
ರೂಪುವಿಡಿದುದಯಿಸಿಯಳಿದು ಮರ
ಳೀಪರಿಯಲೀ ಜನನಮರಣಕ
ಲಾಪದಿಂ ತಿರುಗುತ್ತಿಹುದು ಕಲಿಪಾರ್ಥ ಕೇಳೆಂದ ॥ ೧೯

ವರ ಕಮಲಜನ ರಾತ್ರಿಯೆನಿಸುವ
ನಿರುತವೆನಿಪವ್ಯಕ್ತದಿಂದವೆ
ಪರಸನಾತನ ವನ್ಯವೆನಿಸುವುದಾವುದಾನೊಂದು ।
ಪರಮಮಮಲಾವ್ಯಕ್ತಚಿನುಮಯ
ಪಿರಿದೆನಿಪ ಪರಬೊಮ್ಮವೀಜಗ
ಕರಗಿ ನೆರೆ ಕೆಟ್ಟಡೆಯು ಕೆಡದಿಹುದೆಂದನಸುರಾರಿ ॥ ೨೦

ಅಡಿಗಡಿಗೆ ಕೆಡದಾತ್ಮನಿಂದ್ರಿಯ
ಗಡಣಚರಿಸದ ಕತದಿ ಶ್ರುತಿಗಳ
ಗಡಣದಿಂದವ್ಯಕ್ತವೆನಿಸುವು ದಾವುದಾನೊಂದು ।
ಬಿಡದೆ ಪರಗತಿಯೆಂದು ಪೇಳ್ವರು
ತಡೆಯದಾವುದನೈದಿ ತಿರುಗರು
ದೃಢವೆನಿಪ ನಿಜಪದವದೆಂದನು ಪಾರ್ಥಗಸುರಾರಿ ॥ ೨೧

ಜಾಣ ಕುಂತೀಸುತ ಸಮಸ್ತ
ಪ್ರಾಣಿಗಳು ನೋಡಾವನೊಬ್ಬನ
ಕೇಣದಿಂ ದಿಹುವಾವನಿಂ ದೀಜಗವು ನಿರ್ಮಿತವು ।
ಮಾಣದಾಪರಮಾತ್ಮಗನ್ಯವ
ಕಾಣದಿಹ ವರಭಕ್ತಿಯೋಗದ
ಜಾಣನೇ ನಿಜಪದವನೈದುವ ನೆಂದನಸುರಾರಿ ॥ ೨೨

ವರ ಭರತಕುಲತಿಲಕ ಪಾವನ
ತರರೆನಿಪ ಯೋಗಿಗಳು ಕಡೆಯಲಿ
ಸರಿರವನು ಬಿಡಲಾವಕಾಲದ ವೈಭವಂಗಳಲಿ ।
ಮರಳಿ ತಿರುಗರು ತಿರುಗಿ ಬಹರಾ
ಯೆರಡು ಕಾಲವ ನಿನಗೆ ನಾ ವಿ
ಸ್ತರಿಸುವೆನು ಕೇಳೆಂದನಾ ಮುರವೈರಿ ಕರುಣದಲಿ ॥ ೨೩

ಜಗದೊಳಗ್ನಿಜ್ಯೋತಿಯುದರಿಂ
ಹಗಲು ಬೆಳಗುವ ಶುಕ್ಲಪಕ್ಷದ
ಬಗೆಯಲೊಗೆದಭಿಮಾನದೇವರು ಮಕರ ಮೊದಲಾದ ।
ವಿಗಡ ಷಣ್ಮಾಸಂಗಳಿವುತಾ
ಮಿಗಿಲೆನಿಸುತಿಹು ವುತ್ತರಾಯಣ
ಸುಗತಿಯುದರಲ್ಲಿಯೆ ಮುಕ್ತರು ಬ್ರಹ್ಮವಿದರೆಂದ ॥ ೨೪

ಧೂಮ ರಾತ್ರಿಯು ಕೃಷ್ಣಪಕ್ಷ
ಸ್ತೋಮ ಕರ್ಕಾಟಕವು ಮೊದಲಾ
ದಾಮಹಾ ಷಣ್ಮಾಸದೇವರು ದಕ್ಷಿಣಾಯನವು ।
ಸೋಮಲೋಕದ ಮಾರ್ಗದಲ್ಲಿ ವಿ
ರಾಮದಿಂ ಗತರಾದವರು ತ
ತ್ಸೋಮಲೋಕವನೈದಿ ಮರಳುವ ರೆಂದನಸುರಾರಿ ॥ ೨೫

ಈ ತೆರದಲಿಹ ಶುಕ್ಲಕೃಷ್ಣ
ಖ್ಯಾತಿವಿಡಿದೀವುಭಯಮಾರ್ಗದ
ನೀ ತಿಳಿದು ನೋಡೀಜಗಕೆ ಶಾಶ್ವತವೆನಿಸುತಿಹುದು ।
ನೀತಿಯಿಂ ಕೇಳುತ್ತರಾಯಣ
ದಾತ ಮರಳನು ದಕ್ಷಿಣಾಯನ
ದಾತ ನೀಭೂತಳಕೆ ಮರಳುವ ನೆಂದನಸುರಾರಿ ॥ ೨೬

ಈವುಭಯಗತಿಗಳನು ನೆರೆ ತಾ
ನಾವ ಪರಿಯಿಂ ತಿಳಿದ ಕತದಿಂ
ದಾವಯೋಗಿಯು ಮುಂದುಗೆಡ ಸಂಸಾರದಪಟಲಕೆ ।
ಭೂವರನೆ ಕೇಳದು ನಿಮಿತ್ತವು
ತೀವಿದೆಲ್ಲಾ ಕಾಲದಲಿ ಚಿ
ದ್ಭಾವದಿಂ ಪರಯೋಗಿ ನೀನಾಗೆಂದನಸುರಾರಿ ॥ ೨೭

ಶ್ರುತಿಗಳಲಿ ಯಜ್ಞಂಗಳಲಿ ಸು
ವ್ರತತಪೋದಾನಂಗಳಲಿ ನಿ
ಕ್ಷಿತ ವಿಹಿತದಿಂ ದಾವಪುಣ್ಯವು ಫಲಿಸುತಿಹುದದನು ।
ಅತಿಗಳೆವನೆಲ್ಲವನು ನಿಜದು
ಸ್ಥಿತಿಯನರಿದಾಯೋಗಿ ನಿರ್ಗುಣ
ಗತಿಯೆನಿಪ ಪರತತ್ವಪದವನು ಪಡೆವನವನೆಂದ ॥ ೨೮

- ಇಂತು ಅಕ್ಷರಪರಬ್ರಹ್ಮಯೋಗವೆಂಬ ಎಂಟನೇ ಅಧ್ಯಾಯ ಸಂಪೂರ್ಣ-

# ಒಂಭತ್ತನೇ ಅಧ್ಯಾಯ - ರಾಜವಿದ್ಯಾರಾಜಗುಹ್ಯಯೋಗ

ಸೂಚನೆ ॥ ರಾಜಯೋಗವ ವಿವರಿಸಿದ ಯದು
ರಾಜವಂಶದೊಳುತ್ತಮನು ಸುರ
ರಾಜತನಯಂಗೊಲವಿನಿಂ ಧೃತರಾಷ್ಟ್ರ ಕೇಳೆಂದ ॥

ಆವುದೊಂದನು ತಿಳಿಯೆ ಭವದುಃ
ಖಾವಳಿಯ ಬಂಧನದದೆಸೆಯಿಂ
ದಾವಿಮೋಕ್ಷವ ಪಡೆವೆ ನೀನತಿಗೋಪ್ಯವಾಗಿರ್ಪ ।
ಈವಿಮಲವಿದ್ಯೆಯನಸೂಯಾ
ಭಾವಿ ನಿನಗಿಲ್ಲಾಗಿ ಶಾಸ್ತ್ರವು
ನಾವಲಂಬನದಿಂದ ಉಸುರುವೆನೆಂದನಸುರಾರಿ ॥ ೧

ಪಾವನವಿದತಿಗೋಪ್ಯ ವರವಿ
ದ್ಯಾವಳಿಯೊಳುತ್ತಮವು ಧರ್ಮದ
ಸೋಪಿಕೊಂಡುದು ಮಾಡಲಿಕೆ ಸುಸಾಧ್ಯವೆನಿಸುವುದು ।
ಜೀವರಿಗೆ ಪ್ರತ್ಯಕ್ಷಗಮ್ಯವು
ತಾ ವಿಮಲವಕ್ಷಯವೆನಿಪ
ಚಿದ್ವಾಸನಾಧನ ರಾಜವಿದ್ಯವು ಪಾರ್ಥ ಕೇಳೆಂದ ॥ ೨

ಅವಿಧಯುಕರ ಈ ಸುಧರ್ಮದ
ಪರರಹಸ್ಯವ ನಂಬಲರಿಯದ
ನರಪಶುಗಳೆನ್ನಯ ಪದವನೈದದೆ ಮರಳಿ ಜನಿಸಿ ।
ಮರಳಿ ಜನ್ಮವನಿಕ್ಕ ಭವಸಾ
ಗರದಪಥದಲಿ ತಿರುಗುತಿಹರಿದು
ನಿರುತವೆಂದರ್ಜುನನ ಬೋಧಿಸಿದನು ಮುರಧ್ವಂಸಿ ॥ ೩

ಅರಿಯಬಾರದ ಸೂಕ್ಷ್ಮರೂಪಿಂ
ಮೆರೆಯುತಿರ್ಪೆನ್ನಿಂದಖಿಳಜಗ
ತುರುಗಿ ನಿರ್ಮಿತವಾಗಿರುವುದೆನ್ನೊಳು ಚರಾಚರವು ।
ನಿರುಗೆಯಿಂದಿರುತಿಹುದು ಕೇಳಾ
ಮೆರೆವ ಜಗದೊಳಗಾನು ಸಿಲುಕೆನು
ಮರೆಯಬೇಡೈ ಪಾರ್ಥ ನೀನಿದನೆಂದನಸುರಾರಿ ॥ ೪

ಎನ್ನಲೀಭೂತಂಗಳಿರವಿದು
ಮುನ್ನ ದಿಟಕಿಲ್ಲಾಗಿ ಕೇಳೈ
ಯೆನ್ನ ಯೋಗೈಶ್ವರ್ಯವೇ ಧರಿಸಿಹುದಖಿಲಜಗವ ।
ಎನ್ನಯೋಗೈಶ್ವರ್ಯರೂಪವು ।
ಭಿನ್ನರೂಪವ ಸೃಜಿಸುವದರಲಿ
ಸನ್ನಿಹಿತವಾಗಿರದು ಜಗವದು ಪಾರ್ಥ ಕೇಳೆಂದ ॥ ೫

ಗಗನದೊಳು ಹೊದ್ದದಲೆ ತಾನದ
ರಗಲದಲಿ ತುಂಬಿರ್ದದೆತ್ತಲು
ಮಿಗುವ ವಾಯುವದೆಂತು ನೋಡಾತೆರದೊಳೀಜಗವು ।
ಬಗೆಯಲೆನ್ನನು ಹೊದ್ದದೆನ್ನಲಿ
ಮಿಗೆ ಮೆರೆಯುತಿರ್ಪುದು ಮಾಯಾ
ತ್ರಿಗುಣಕಾರ್ಯವಿದೆಂದು ನೀ ತಿಳಿಯೆಂದನಸುರಾರಿ ॥ ೬

ಕಮಲಜನ ಕಲ್ಪಾಂತದಲಿ ತ
ತ್ಕ್ರಮದ ಸಚರಾಚರವಿದೆನ್ನಯ
ವಿಮಳಮಾಯೆಯೊಳಳಿದಿರಲು ಮರಳಿಯು ಕಮಲಭವನಾ ।
ಸಮನಿಸದೆ ಕಲ್ಪಾದಿಯೊಳಹಂ
ಮಮವಿಡಿದ ಸಚರಾಚರಂಗಳ
ನಿಮಿಷದಲಿ ನಿರ್ಮಿಸುತಲಿಪೆನಾ ನೆಂದನಸುರಾರಿ ॥ ೭

ಪ್ರಕೃತಿವಶದ ಸ್ವತಂತ್ರವಿಲ್ಲದ
ಸಕಲಭೂತಗ್ರಾಮವನು ತಾ
ನಖಿಲಕಲ್ಪಾದಿಯಲಿ ಯೆನ್ನಯಧೀನವಾಗಿದ್ದು ।
ಪ್ರಕೃತಿಯನು ಮಿಗೆ ಕೂಡಿ ಸೃಜಿಸುವೆ
ಸಕಲಲೋಕವ ಮರಳಿ ನಾಂ ತ
ತ್ಪ್ರಕೃತಿವಶವಾಗಿಹೆನು ಕೇಳೆಂದನು ಮುರಧ್ವಂಸಿ ॥ ೮

ಎಲೆಧನಂಜಯ ಈಜಗಂಗಳ
ಸೊಲಿದು ಸೃಷ್ಟಿಸಿ ಲಯವ ಮಾಡುವ
ಹಲವು ಕರ್ಮಗಳೆನ್ನ ನಿರ್ಬಂಧಿಸವದೇಕೆನಲು ।
ಫಲವ ಬಯಸೆನು ಸಕಲಕರ್ಮದ
ಹೊಲಬಿನೊ ಳುದಾಸೀನನೆನಿಸಿದ
ಬಲುಮುನಿಗಳಂದದಲಿ ನಾನಿಹ ಕತದಿ ಕೇಳೆಂದ ॥ ೯

ಎನ್ನಧಿಷ್ಠಾನದ ಬಲುಹಿನಿಂ
ಸನ್ನಿಹಿತವಹ ಮಾಯೆ ಸ್ಥಾವರ
ದುನ್ನತದ ಜಂಗಮಜಗತ್ತುಗಳನು ಸೃಜಿಸುತಿಹುದು ।
ಎನ್ನನರಿಯದವಿದ್ಯೆಯಿಂದಾ
ಭಿನ್ನಕಾರಣದಿಂದ ಲೀಜಗ
ಮುನ್ನ ಸಂಸಾರದಲಿ ತೊಟ್ಟನೆ ತೊಳಲುತಿಹುದೆಂದ ॥ ೧೦

ಯಜ್ಞದಧಿಪತಿ ನಿಖಿಲಭೂತ ಗು
ಣಜ್ಞನೆನಿಪ ಮಹೇಶ್ವರನು ಸ
ರ್ವಜ್ಞನಾನೆಂದೆನ್ನ ನಿಜಭಾವವ ನರಿಯದವರು ।
ಅಜ್ಞರುಗ ಳೀಮನುಜದೇಹವ
ನಜ್ಞತನದಿಂ ಧರಿಸಿದೆನ್ನನ
ವಜ್ಞೆಯನು ಮಾಡುವರು ಮಾನವರೆಂದನಸುರಾರಿ ॥ ೧೧

ಅಸುರರಾಕ್ಷಸಜನವ ಹೊದ್ದಿಹ
ಹೊಸಪರಿಯ ಮೋಹವನು ನೆರೆ ವು
ಟ್ಟಿಸುವ ಪ್ರಕೃತಿಯ ಕೂಡಿಕೊಂಡಿಹ ಮೂಢಮಾನವರು ।
ಶಿಶುಗಳಂದದಿ ಫಲರಹಿತವಹ
ಹುಸಿಯ ಬಯಕೆ ನಿಷಿದ್ಧಕರ್ಮವು
ವಿಷಯಮೋಹಜ್ಞಾನವುಳ್ಳವ ರೆಂದನಸುರಾರಿ ॥ ೧೨

ದೇವತಾಸಂಬಂಧಿಯಾಗಿ
ರ್ಪೀವಿಮಲ ಪ್ರಕೃತಿಯನು ಹೊದ್ದಿದ
ಭಾವಶುದ್ಧಮಹಾತ್ಮರೆನ್ನ ನನನ್ಯಭಾವದಲಿ ।
ದೇವನಾನಜ ನವ್ಯಯನು ಭೂ
ತಾವಳಿಗೆ ನಾನಾದಿಕಾರಣ
ಪಾವನೋತ್ತಮ ನೆಂದರಿದು ಭಜಿಸುವರು ಕೇಳೆಂದ ॥ ೧೩

ಅನವರತ ಕೀರ್ತಿಸುವರೆನ್ನನೆ
ಅನವಧಿಕ ನಿಯಮ ವ್ರತಂಗಳ
ಲನವರತ ಯಜಿಸುವರು ನಿರ್ಮಲ ಮನದ ಭಕ್ತಿಯಲಿ ।
ಅನವರತ ವಂದಿಸುವರೆನ್ನನು
ವಿನುತಯೋಗಾಭ್ಯಾಸಿಗಳು ತನು
ಮನಧನವ ನರ್ಪಿಸುತಿಹರು ಕಲಿ ಪಾರ್ಥ ಕೇಳೆಂದ ॥ ೧೪

ಮತ್ತೆ ಕೆಲಬರು ತತ್ವನಿಷ್ಠರು
ಉತ್ತಮೋತ್ತಮಜ್ಞಾನಯಜ್ಞದಿ
ನಿತ್ಯಮೆನ್ನನು ಧ್ಯಾನಿಸುತ ಭಜಿಸುವರು ಭಕ್ತಿಯಲಿ ।
ಚಿತ್ತದೇಕೋಭಾವದಿಂ ಪುರು
ಷೋತ್ತಮನು ನಾನೆಂದಭೇದವ
ಹತ್ತಿ ಹಲವಂದದಲಿ ಯಜಿಪರು ಪಾರ್ಥ ಕೇಳೆಂದ ॥ ೧೫

ನಾನಹೇಕ್ರತು ಯಜ್ಞಸಂಚಕ
ನಾನೆ ತಾಂ ಸ್ವಾಹಾಸ್ವಧಾತ್ಮಕ
ನಾನೆ ಸಕಲೌಷಧಿವನಸ್ಪತಿ ಮಂತ್ರಚಯ ನಾನೆ ।
ನಾನೆ ಘೃತ ಪಾವಕನು ಹೋಮವೆ
ನಾನೆ ಲೋಕದೊಳಲ್ಲದೆನ್ನಿಂ
ದೇನು ಬೇರೊಂದಿಲ್ಲ ವೈ ಕಲಿ ಪಾರ್ಥ ಕೇಳೆಂದ ॥ ೧೬

ವರಪಿತಾಮಹ ಮಾತೃಪಿತೃಗಳು
ಹೊರೆವೊಡೆಯ ನೀಜಗಕೆ ಕೇಳೈ
ಪರಮಪಾವನ ನರಿಯಬೇಡಿದ ತತ್ವವದು ನಾನು ।
ಪರತರ ಪ್ರಣವಾತ್ಮ ವೇದದೊ
ಳುರುತರದ ಋಕ್ಸಾಮಯಜು ವಿ
ಸ್ತರಮಯನು ನಾನಲ್ಲದಿರುತಿಹ ವಸ್ತುವಿಲ್ಲೆಂದ ॥ ೧೭

ಗತಿ ಜಗಕೆ ಪುರುಷಾರ್ಥದಾಯಕ
ಪತಿ ಪೊರೆವ ರಕ್ಷಕನು ಸಾಕ್ಷಿ
ಸ್ಥಿತಿಗೆ ನೆಲೆವನೆ ಬಂಧು ಜನನಸ್ಥಾನವೆಲ್ಲಕ್ಕೆ ।
ಮೃತಿಗೆ ಪ್ರಳಯಸ್ಥಾನ ಲೋಕಕೆ
ಶ್ರುತಿವಿಹಿತದಿಂದಾದಿಕಾರಣ
ನಂತ ಪರಾಕ್ರಮಿ ಕೇಡನೈದದಬೀಜ ನಾನೆಂದ ॥ ೧೮

ಸೂರಿಯನ ರೂಪಿನಲಿ ತಪಿಸುತ
ನೀರಸವ ಮಾಡುವೆನು ಮಳೆಯನು
ಬಾರದಂತಿರೆ ತಡೆದು ಕರೆವೆನು ಮೇಘರೂಪದಲಿ ।
ಬಾರದು ಮೋಕ್ಷಪ್ರ ಮೃತ್ಯುನಾನು ವಿ
ಚಾರಿಸಲು ಬದುಕು ಸತ್ತು ವಿ
ಕಾರವಿಲ್ಲದ ವಸ್ತು ನಾನೆಲೆ ಪಾರ್ಥ ಕೇಳೆಂದ ॥ ೧೯

ಶ್ರುತಿಗಳನುಮತಿಯುಳ್ಳವರು ದೀ
ಕ್ಷಿತರು ಸಗ್ಗವ ಬಯಸಿ ನಾನಾ
ಕ್ರತುಗಳಿಂದವೆ ಯಜಿಸಿ ನೆರೆ ನಿಷ್ಪಾಪರಾದವರು ।
ಕ್ರತುಫಲದಿ ದೇವೇಂದ್ರಲೋಕ
ಸ್ಥಿತಿಯ ಪಡೆದಾದೇವತೆಗಳು
ಸ್ನತದ ಭೋಗಂಗಳನು ಭೋಗಿಸುತಿಹರು ಕೇಳೆಂದ ॥ ೨೦

ಅವರು ಸ್ವರ್ಗದ ಸುಖಕರದ ಭೋ
ಗವನು ಭೋಗಿಸಿ ಪುಣ್ಯತೀರಲಿ
ಕವರು ನಿಜದಿಂ ಮರ್ತ್ಯಲೋಕವ ಹೊಗುವರೀತೆರದಿ ।
ವಿವಿಧವೇದದ ಧರ್ಮವನು ಮಾ
ಡುವ ವಿಷಯಕಾಮುಕರು ಧರಣಿಗೆ
ದಿವಕೆ ಬಿಡದೆಡೆಯಾಡುವರು ಕಲಿ ಪಾರ್ಥ ಕೇಳೆಂದ ॥ ೨೧

ಆರು ಕೆಲಬರು ನನ್ನನೇ ನೆರೆ
ಸಾರಿ ಮತ್ತೇನುವನು ಬಯಸದ
ಧೀರರುಗಳೆನ್ನನು ಯಜಿಪರಾನಿತ್ಯಮುಕ್ತರಿಗೆ ।
ಸಾರತರಪರಲೋಕಲಾಭ ದು
ದಾರದಿಹಲೋಕದ ಸುಖಂಗಳ
ಸೇರುವೆಯ ರಕ್ಷೆಯನು ತಾ ವಹಿಸುವೆನು ಕೇಳೆಂದ ॥ ೨೨

ಅನ್ಯದೇವರ ಭಕ್ತರಾಗಿಯೆ
ಸನ್ನಿಹಿತವಿಶ್ವಾಸದಿಂ ಸಂ
ಪನ್ನಭಕ್ತಿಯೊಳಾರು ಕೆಲಬರು ಯಜಿಸುತಿಹರವರು ।
ಎನ್ನನೇ ಶ್ರುತಿವಿಹಿತವಿಧಿಯಲಿ
ಮನ್ನಿಸದೆ ಯಜಿಸುವರವರಿಗಾ
ಧನ್ಯಗತಿ ಬೇಗದಲಿ ದೊರಕದು ಪಾರ್ಥ ಕೇಳೆಂದ ॥ ೨೩

ಸರ್ವಯಜ್ಞಂಗಳನು ಭೋಗಿಪ
ಸರ್ವಕಧಿಪತಿಯೆನಿಸಿದೆನ್ನನು
ಸರ್ವಥಾ ಪರತತ್ವವೆಂದುರೆ ಯರಿಯದುದರಿಂದ ।
ಸರ್ವದೇವತೆಗಳನು ಯಜಿಸುವ
ಗರ್ವಿತರು ತತ್ವದಲಿ ವಿಮುಖರು
ಸರ್ವದೇಹಂಗಳೊಳು ತಿರುಗುವರೆಂದನಸುರಾರಿ ॥ ೨೪

ಕ್ರತುಗಳಿಂದಿಂದ್ರಪ್ರಮುಖದೇ
ವತೆಗಳನು ಯಜಿಸಿದವರಾಸುರ
ಪತಿಯ ಲೋಕವನೈದುವರು ಪಿತೃಭಕ್ತರವರುಗಳ ।
ಗತಿಯ ಪಡೆವರು ಭೂತನಿಚಯ
ವ್ರತರು ನಡೆವರು ಭೂತಲೋಕಕೆ
ಶ್ರುತಿವಿಹಿತದಿಂ ದೆನ್ನಭಜಿಸುವ ರೆನ್ನನೈದುವರು ॥ ೨೫

ಆವನೊಬ್ಬನು ಭಕ್ತಿಯಿಂದಲಿ
ಪಾವನೋತ್ತಮ ಪತ್ರಪುಷ್ಪ ಫ
ಲಾವಳಿಯನುದಕವನು ತಾನೆನಗರ್ಪಿಸುತಲಿಹನು ।
ಭಾವಶುದ್ಧಾಂತಃಕರಣನವ
ಜೀವನಿಂದರ್ಪಿಸಿದ ಪುಷ್ಪಫ
ಲಾವಳಿಯ ಭೋಗಿಸುವೆನೈ ಕಲಿ ಪಾರ್ಥ ಕೇಳೆಂದ ॥ ೨೬

ಆವ ಕೆಲಸವ ಮಾಳ್ಪೆನೀ ಮ
ತ್ತಾವುದನು ಭುಂಜಿಸುವೆ ಯಜ್ಞಿಯೊ
ಳಾವುದನು ಪೇಳುವೆ ಕೊಡುವೆ ನೀನಾವ ದಾನವನು ।
ಆವ ತಪವನು ಮಾಳ್ಪೆ ಕುಂತೀ
ದೇವಿಯಾತ್ಮಜ ಕೇಳದಲ್ಲವ
ಭಾವಶುದ್ಧಿಯೊಳೆನಗೆ ನೀನು ಸಮರ್ಪಿಸುವುದೆಂದ ॥ ೨೭

ಈ ತೆರನ ನೀ ಮಾಡುವೊಡೆ ವಿ
ಖ್ಯಾತವಹ ಸನ್ಯಾಸಯೋಗದ
ರೀತಿವಿಡಿದಿರ್ದೀಶುಭಾಶುಭಫಲವ ಕೊಡುತಲಿಪ ।
ಜಾತಿವಿಧಿಯಹ ಕರ್ಮಬಂಧನ
ಜಾತದಿಂ ಬಿಡುಗಡೆವಡೆದು ಬಳಿ
ಕಾತತುಕ್ಷಣಮೆನ್ನಪದವನು ಪಡೆವೆ ಕೇಳೆಂದ ॥ ೨೮

ನಾನಖಿಲಭೂತಂಗಳಲಿ ಸಮ
ಹೀನ ಹಗೆ ಕೆಳೆ ಯಿಲ್ಲೆನಗೆ ಕೇಳ್
ಜ್ಞಾನಭಕ್ತಿಯೊಳಾರು ಕೆಲಬರನನ್ಯಭಾವದಲಿ ।
ಸ್ವಾನುಭವದಿಂ ದೆನ್ನನೆಂದುಂ
ಜಾನಿಸುವರವ ರೆನ್ನೊಳಿರುತಿಹ
ರಾಸವರ ಹೃದಯದಲಿ ನೆಲಸಿಹೆನೆಂದನಸುರಾರಿ ॥ ೨೯

ಅತಿದುರಾಚಾರದಿ ನಡೆಯುತಿಹ
ಪತಿತ ಮೊದಲಾಗನ್ಯದೈವವ
ಮತಿಯೊಳಾರಾಧಿಸದೆ ಯೆನ್ನನು ಪೂಜಿಸುತಲಿಹನು ।
ಕ್ಷಿತಿಯೊಳುತ್ತಮವಾದ ತನ್ನಯ
ಗತಿಯನುಳ್ಳವನಾಗಿ ಬುಧರಿಂ
ದತಿಸುಕೃತಿಯೆಂದೆನಿಸಿಕೊಂಬನು ಪಾರ್ಥ ಕೇಳೆಂದ ॥ ೩೦

ಆತನತಿವೇಗದಲಿ ಧರ್ಮದ
ನೀತಿವಿದನಹ ನಡಿಗಡಿಗೆ ಪರಿ
ಪೂತಶಾಂತಿಯನೈದುವನು ಕೆಡ ನೆನ್ನನಿಜಭಕ್ತ ।
ಈತೆರನ ನೀನರಿದು ನಂಬು ಮ
ಹಾತಪಸ್ವಿನ ಫಲವಿದಲ್ಲದೆ
ಮಾತುಮಾತಿನೊಳಾಗದೆನ್ನಯ ಭಕ್ತಿ ಕೇಳೆಂದ ॥ ೩೧

ಅದು ಕೆಲವರು ಪಾಪಿಗಳು ಸಂ
ಸಾರಭಯದಿಂದೆನ್ನ ನೆಟ್ಟನೆ
ಸಾರಿ ಭಜಿಸುತ್ತಿಹರು ಕೇಳೈ ಪಾರ್ಥ ನಿಶ್ಚಯವ ।
ನಾರಿಯರು ವರವೈಶ್ಯಶೂದ್ರ ವಿ
ಕಾರಿಗಳು ಮೊದಲಾಗಿಯೆನ್ನಯ
ಪಾರಪದವನು ಸೇರುವರು ಕಲಿ ಪಾರ್ಥ ಕೇಳೆಂದ ॥ ೩೨

ಧರ್ಮಿಯಹ ಬ್ರಾಹ್ಮಣನು ಭಕ್ತಿಯೆ
ವರ್ಮವಹ ಕ್ಷತ್ರಿಯನು ಮೊದಲಹ
ರುರ್ವಿಗಧಿಕದ ಪದವ ಪಡೆಯುವರೆಂಬುದಚ್ಚರಿಯೇ ।
ಕರ್ಮಸಾಧನ ಮೆನಿಪ ಮಾನವ
ಧರ್ಮವನು ನೀನೈದೆ ಮರೆಯದೆ
ನಿರ್ಮಲದೊಳಾತೆರದೊಳೆನ್ನನು ಭಜಿಸು ನೀನೆಂದ ॥ ೩೩

ಎನ್ನೊಳೇ ಮನವನು ನಿಲಿಸು ನೀ
ನೆನ್ನನೇ ಜಪಿಸೆರಗು ನಿಜದಿಂ
ದೆನ್ನೊಳತ್ಯಾಸಕ್ತಿಯಿಂದಲೆ ಭಕ್ತನೀನಾಗು ।
ಭಿನ್ನಭಾವವನುಳಿದು ಚಿತ್ತವ
ನೆನ್ನೊಳೀಪರಿ ನಿಲಿಸಿದೊಡೆ ನೀ
ನೆನ್ನನೈದುವೆ ಸತ್ಯವಿದು ಕಲಿ ಪಾರ್ಥ ಕೇಳೆಂದ ॥ ೩೪

- ಇಂತು ಸನ್ಯಾಸಯೋಗವೆಂಬ ಒಂಭತ್ತನೇ ಅಧ್ಯಾಯ ಸಂಪೂರ್ಣ -

## ಹತ್ತನೇ ಅಧ್ಯಾಯ - ವಿಭೂತಿಯೋಗ

ಸೂಚನೆ ॥ ಪರಮಯೋಗವಿಭೂತಿಯನು ವಿ
ಸ್ತರಿಸಿದನು ಪಾರ್ಥಂಗೆ ಕರುಣಾ
ಕರ ಮುರಾಂತಕ ಕೃಷ್ಣನೆಲೆ ಧೃತರಾಷ್ಟ್ರ ಕೇಳೆಂದ ॥

ಮತ್ತೆ ಕೇಳೈ ಪಾರ್ಥ ನಾನ
ತ್ಯುತ್ತಮಪ್ರಿಯನಹ ನಿನಗೆ ಕೃಪೆ
ವೆತ್ತು ಸಲೆ ಲೇಸಾಗಬೇಕೆಂಬೀಬಯಕೆಯಿಂದ ।
ಸತ್ಯದಿಂ ದಾವುದ ನುಡಿವೆ ನದ
ಚಿತ್ತದಿಂದವಧರಿಪುದೆನ್ನ ಗು
ಣೋತ್ತಮದ ಸುವಿಭೂತಿವಿಭವವನೆಂದನಸುರಾರಿ ॥ ೧

ಕಮಲಭವ ದೇವೇಂದ್ರ ಮೊದಲಾ
ದಮರರಿಗೆ ಮಹರುಷಿಗಳಿಗೆ ತ
ತ್ಕ್ರಮದೊಳೆಲ್ಲರ್ಗಾದಿ ನಾನಾಗಿರ್ಪ್ಪ ಕತದಿಂದ ।
ಅಮರಗಣ ಮುನಿನಿಕರ ವೆನ್ನಯ
ಸಮಯದುತ್ಪತ್ತಿಯನರಿಯರಾ
ನಮಲನಜ ನವ್ಯಕ್ತನಾಗಿಹೆ ಪಾರ್ಥ ಕೇಳೆಂದ ॥ ೨

ಆವನೆನ್ನನು ಜನನವಿಲ್ಲದ
ದೇವದೇವ ನನಾದಿಲೋಕಕೆ
ಭಾವಿಸಲ್ಕೆ ಮಹೇಶ್ವರನು ಮೆಂದೀಪರಿಯಲರಿವ ।
ಜೀವರೊಳಗೆ ವಿವೇಕಿಯಾತನೆ
ಆವಿಧದ ಪಾತಕದದೆಸೆಯಿಂ
ಪಾವನನು ಬಿಡುಗಡೆಯನೈದುವ ಪಾರ್ಥ ಕೇಳೆಂದ ॥ ೩

ವಸ್ತುನಿಶ್ಚಯ ಶಾಸ್ತ್ರದರಿವು ಸ
ಮಸ್ತರೊಳಗೆಚ್ಚರಿಕೆ ಸೈರಣೆ
ಸತ್ಯವಿಂದ್ರಿಯನಿಗ್ರಹವು ಮಂತಃಕರಣಜಯವು ।
ವಿಸ್ತರದ ಸುಖದುಃಖ ಸಿರಿಗಳ
ವಸ್ಥೆ ಬಡತನ ಭಯವಭಯವಿವು
ಚಿತ್ತವಿಸು ಸಂಸಾರಿಗಳಿಗೆನ್ನಿಂದಲಹುವೆಂದ ॥ ೪

ಕೊಲ್ಲದಿರವು ಸಮಸ್ತಪ್ರಾಣಿಗ
ಳಲ್ಲಿ ಸಮತೆಯು ತುಷ್ಟಿ ತಪವಾ
ಸಲ್ಲಲಿತದಾನವು ಯಶಸ್ಸಪಕೀರ್ತಿ ಮೊದಲಾದ ।
ಪಲ್ಲವಿಪ ಬಹುಚೇಷ್ಟೆ ಪ್ರಾಣಿಗ
ಳೆಲ್ಲರಿಗೆ ಕೇಳೆನ್ನದೆಸೆಯಿಂ
ನಿಲ್ಲದಹ ಭಾವಗಳು ಛಂದದೊಳೆಂದನಸುರಾರಿ ॥ ೫

ಸುರನರಾದಿಗಳಾರ ಸಂತತಿ
ನಿರುತದಿಂ ಕಮಲಜನ ಮಾನಸ
ವರತನುಜರೆಂದೆಂಬ ನಾಲುಕು ಮನುಗಳವರುಗಳು ।
ಹಿರಿಯರೆನಿಸಿದ ಸಪ್ತಋಷಿಗಳು
ಗರುವರೆನ್ನಂಶಂಗಳಾಗಿಯೆ
ಭರದಲೆನ್ನನು ನೆನೆಯುತಿಹರೆಲೆ ಪಾರ್ಥಕೇಳೆಂದ ॥ ೬

ಆವನೊಬ್ಬನು ಎನ್ನೊಳಿಹ ವರ
ಭಾವಯೋಗೈಶ್ವರ್ಯಮಹಿಮೆಯ
ಜೀವರೊಳು ನಿರ್ಧರಿಸಿ ತಿಳಿವನೊ ಆಮುನೀಶ್ವರನು ।
ಪಾವನನು ವರಮೋಕ್ಷಸಿದ್ಧಿಯ
ನೀವ ನಿಶ್ಚಲಯೋಗದಿಂದುಪ
ಜೀವಿಸುವನದರಲ್ಲಿ ಸಂಶಯವಿಲ್ಲಕೇಳೆಂದ ॥ ೭

ಸರ್ವಜನದುದುಭವಕೆ ತಾನೇ
ಸರ್ವದಾ ಕಾರಣವೆನಿಸುವೆನು
ಸರ್ವಜಗಚೇಷ್ಟಿಸುತಿಹುದು ಕೇಳೆನ್ನದೆಸೆಯಿಂದ ।
ಸರ್ವಥಾ ಈಪರಿಯರಿದು ನೆರೆ
ಸರ್ವವಿದರೇಕಾಗ್ರಚಿತ್ರರು
ಸರ್ವಕಾಲದೊಳೆನ್ನಭಜಿಸುವರೆಂದನಸುರಾರಿ ॥ ೮

ಎನ್ನೊಳೆರಗಿದ ಚಿತ್ತದವರುಗ
ಳೆನ್ನೊಳೇ ಪ್ರಾಣವನು ನಿಯಮಿಸು
ತೆನ್ನ ನಿಜವನು ತಮ್ಮೊಳೊಬ್ಬರಿಗೊಬ್ಬರರುಹುತಲಿ ।
ಎನ್ನನನುದಿನ ಕೀರ್ತಿಸುತಲ
ನ್ಯೋನ್ಯಭಾವದಿ ರಮಿಸುತಲೆ ಸಂ
ಪನ್ನಮುನಿಗಳು ತುಷ್ಟಿಬಡುತಿಹ ರೆಂದನಸುರಾರಿ ॥ ೯

ಪ್ರೀತಿಪೂರ್ವಕವಾ ಗನವರತ
ನೀತಿಯಿಂದಲೆ ಯೋಗಯುತರಾ
ಗೀತರದಿ ಭಜಿಸುತ್ತಲಿರುತಿಹ ಶಮದಮಾತ್ಮರಿಗೆ ।
ತಾತ ಕೇಳವರೆನ್ನ ನೈದುವ
ರೋತದಾವುದರಿಂದ ಲಾವಿ
ಖ್ಯಾತಮಾದಾಬುದ್ಧಿಯೋಗವ ಕೊಡುವೆನಾನೆಂದ ॥ ೧೦

ಆಮಹಾಮುನಿಗಳಿಗೆ ಪ್ರೇಮದಿ
ತಾಮಸದ ಗುಣವಾದವಿದ್ಯಾ
ಸ್ತೋಮದಿಂ ಜನಿಸಿದ ತಮಸ್ಸನತಿಪ್ರಭೆಯನುಳ್ಳ ।
ಆಮಹಾವಿಜ್ಞಾನದೀಪದಿ
ನೇಮದಿಂ ಕೆಡಿಸುವೆನು ಭಕ್ತ
ಸ್ತೋಮವನು ರಕ್ಷಿಸಲಿಕೋಸುಗ ಪಾರ್ಥ ಕೇಳೆಂದ ॥ ೧೧

ಪರಿ ಸುತಿಯಲೀಪರಿ ಧನಂಜಯ
ಮರಳಿ ಬಿನ್ನಹಮಾಡಿದನು ನೀಂ
ಪರಮಪಾವನ ಗುರು ಪರಬ್ರಹ್ಮವು ಪರಂಧಾಮ ।
ಹರಿಯ ಋಷಿಗಳು ನಿನ್ನ ನಕ್ಷಯ
ಪರಮಪೂರುಷನಾದಿದೇವನು
ನಿರುತದಿಂದಜ ಸರ್ವಗತ ನೆನುತಿಹರು ಕೇಳೆಂದ ॥ ೧೨

ದೇವಋಷಿ ನಾರದರು ಮಸಿತನು
ದೇವಲನು ದ್ವೈಪಾಯನನು ಭೂ
ದೇವರೆನಿಪ ಸಮಸ್ತಮುನಿಗಳು ನಿನ್ನ ಮಹಿಮೆಗಳ ।
ಭಾವದಿಂ ಕೊಂಡಾಡುವರೆಲ್ಲೈ
ದೇವ ನೀನೇ ಎನಗೆ ಹೇಳಿದೆ
ಯಾವಿಭೂತಿಯನಿನ್ನು ವಿಸ್ತರವಾಗಿ ಹೇಳೆಂದ ॥ ೧೩

ಎಲೆಹರಿಯೆ ನೀನಾವುದೊಂದನು
ನಲಿದೆನಗೆ ಪೇಳಿದೆ ಯದೆಲ್ಲವ
ನೆಲೆಯಿದೆಂದೇ ಬಗೆವೆ ನಿನ್ನಯ ನಿಜದ ನಿಶ್ಚಯವ ।
ಹಲವು ದೇವರು ದಾನವರುಗಳು
ಹೊಲಬನರಿಯದ ಕಾರಣದಿ ನಿ
ರ್ಮಲದಭಿವ್ಯಕ್ತಿಯನು ಕೃಪೆಮಾಡೆಂದನಾ ಪಾರ್ಥ ॥ ೧೪

ಸಕಲಭೂತವ ಸೃಜಿಸುವನೆ ಆ
ಸಕಲಭೂತೇಶ್ವರನೆ ಪಾವನ
ಸಕಲದೇವರ ದೇವ ಪುರುಷೋತ್ತಮ ಜಗತ್ಪತಿಯೇ ।
ಪ್ರಕಟದಿಂ ನೀಂ ನಿನ್ನುವನು ಸು
ವ್ಯಕುತ ನಿನ್ನಿಂದರಿವೆ ಯಲ್ಲದೆ
ಸಕಲಜಗ ವಿಟಕರಿಯುದೆಲೆ ಮುರವೈರಿ ಕೇಳೆಂದ ॥ ೧೫

ಎಲೆಹರಿಯೆ ನೀನಾವ ಕೆಲವೀ
ಬಲುವಿಭೂತಿಗಳಿಂದ ಲೋಕಂ
ಗಳನು ವ್ಯಾಪಿಸಿಕೊಂಡು ನೆಲಸಿಹೆ ನಿತ್ಯವೆನಿಸುತಿಪ ।
ಹಲವೆನಿಪ ನಿನ್ನಾವಿಭೂತಿಯ
ನೆಲೆಯ ನೆಲ್ಲವನುಳುಹದೆನಗುರೆ
ನಲವಿನಿಂ ಕರುಣಿಸಲು ಬೇಹುದು ದೇವ ಕೇಳೆಂದ ॥ ೧೬

ಪರಮಯೋಗೀಶ್ವರನೆನಿಸುತಿಹ
ಹರಿಯೆ ನಿನ್ನನು ನಿತ್ಯವಾಗಿಯೆ
ನಿರುತದಿಂ ಚಿಂತಿಸುತಲಾನೆಂತರಿವೆ ನಿನ್ನುವನು ।
ಸುರನರಾದಿ ಸಮಸ್ತಜೀವರೊಳಿರದೆ
ನೀನಾವಾವಪರಿಯಿಂ
ಪಿರಿದು ನೆನೆಯಿಸಿಕೊಂಬೆ ಯದುನೆನಗರುಹಬೇಕೆಂದ ॥ ೧೭

ಎಲೆಜನಾರ್ದನ ನಿನ್ನ ಯೋಗದ
ಹಲವು ವಿಧದ ವಿಭೂತಿಗಳ ನೀ
ನೊಲಿದು ವಿಸ್ತರದಿಂದ ಕೃಪೆಮಾಡೈ ಕಥಾಮೃತವ ।
ಸಲೆ ಸೊಗಸಿ ಕೇಳ್ವೆನೆಗೆ ತೃಪ್ತಿಯ
ನೆಲೆಗೆ ದೊರಕದ ಕಾರಣದಿ ನಿ
ರ್ಮಲದ ಯೋಗವಿಭೂತಿಯನು ಮಗುಳೊರೆಯಬೇಕೆಂದ ॥ ೧೮

ಈಪರಿಯೆಲರ್ಜುನನು ನಾನಾ
ರೂಪಿನಿಂ ಬಿನ್ನೈಸೆ ಕರುಣದ
ಲಾಪರಮಪುರುಷೋತ್ತಮನು ಪಾರ್ಥಂಗೆ ಪರಿವಿಡಿದು ।
ರೂಪುಗಳ ನಾಮಂಗಳನು ತ
ದ್ರೂಪಸಾಮರ್ಥ್ಯಂಗಳನು ನಿಜ
ರೂಪದಿಂ ಜನಿಸಿದುದನರಿಪಿದನಂದು ಮುರವೈರಿ ॥ ೧೯

ಎಲೆಧನಂಜಯ ಸಕಲಭೂತಂ
ಗಳ ಹೃದಯದೊಳಗಿರ್ಪ ಜೀವನು
ನೆಲೆಗೆ ನಾನೇಸರ್ವಭೂತಂಗಳಿಗೆ ಪರಿಕಿಸಲು ।
ಸಲೆ ಮೊದಲು ನಡು ಕಡೆಗಳಾನಿಃ
ನೆಲೆಯ ಬಲ್ಲವನಾವನೈ ಕುರು
ಕುಲತಿಲಕ ಕೇಳೆಂದನಾಮುರವೈರಿ ಕರುಣದಲಿ ॥ ೨೦

ದ್ವಾದಶಾದಿತ್ಯರೊಳು ವಿಷ್ಣುವು
ಹೋದಯದ ಜ್ಯೋತಿರ್ಗಣಂಗಳೊ
ಳಾದಿವಾಕರನಹೆನು ಮತ್ತೆ ಮರುದ್ಗಣಂಗಳೊಳು ।
ಭೇದಿಸಲ್ಕೆ ಮರೀಚಿಯಶ್ವಿನಿ
ಯಾದಿಯಹ ತಾರೆಗಳೊಳಗ್ಗಳ
ನಾದ ಶಶಿ ತಾನಾಗಿಹೆನು ಕಲಿ ಪಾರ್ಥ ಕೇಳೆಂದ ॥ ೨೧

ಶ್ರುತಿಗಳೊಳು ವರಸಾಮವಾದೇ
ವತೆಗಳೊಳು ಸುರನಾಥ ನಾಂ ನಿ
ರ್ಮಿತದ ಸಕಲೇಂದ್ರಿಯದೊಳಗೆ ಮನವಾಗಿ ನಾನಿಹೆನು ।
ನುತಸಮಸ್ತ ಪ್ರಾಣಿವರ್ಗ
ಸ್ಥಿತಿಯೊಳಂತಃಕರಣವೃತ್ತಿಯ
ಗತಿಯರಿವ ಚೈತನ್ಯ ನಾನಾಗಿಹೆನು ಕೇಳೆಂದ ॥ ೨೨

ಶಂಕರನು ರುದ್ರರೊಳು ಯಕ್ಷರ
ಸಂಕೆಗಳೊಳು ಕುಬೇರ ನಾಂ ನಿ
ಶ್ಶಂಕಪಾವಕನಾಗಿಹೆನು ಕೇಳಷ್ಟವಸುಗಳೊಳು ।
ತೆಂಕಬಡಗಣ ಗಿರಿಗಳೊಳಗಕ
ಳಂಕ ಮೇರುಗಿರೀಂದ್ರನಾಗಿಹೆ
ಪಂಕಜಾಕ್ಷನು ಪಾವನನು ನಾನೆಂದನಸುರಾರಿ ॥ ೨೩

ನರಪತಿಪುರೋಹಿತರೊಳೆನ್ನನು
ವರಬೃಹಸ್ಪತಿಯೆಂದು ತಿಳಿ ಸಂ
ಗರದ ದಳಪತಿಗಳೊಳು ನಾನೇ ಸ್ವಾಮಿ ಕಾರ್ತಿಕನು ।
ಸರಸಿಗಳೊಳು ಸಮುದ್ರನಾಗಿಹೆ
ನಿರುತವಿದು ಕೇಳೈ ಧನಂಜಯ
ಪರಮತತ್ವಜ್ಞಾನನಿಷ್ಠರು ಬಲ್ಲರಿದನೆಂದ ॥ ೨೪

ಉತ್ತಮಮರ್ಷಿಗಳೊಳಾಂ ಭೃಗು
ಮತ್ತೆ ಕೇಳಕ್ಷರವೆನಿಸುವ
ಯುತ್ತರೊಳ ಗೋಂಕಾರವಾಗಿಹೆ ನಖಿಲಯಜ್ಞದೊಳು ।
ಸತ್ಯದಿಂ ಜಪಯಜ್ಞವಾಗಿಹೆ
ನಿತ್ತಕೇಳೈ ಸ್ಥಾವರಂಗಳೆ
ಮೊತ್ತದೊಳು ಹಿಮವಂತನೈ ನಾನೆಂದನಸುರಾರಿ ॥ ೨೫

ಸರ್ವವೃಕ್ಷಂಗಳೊಳು ನಾನೇ
ಉರ್ವಿಯೊಳಗಶ್ವತ್ಥ ಬಳಿಕೀ
ಸರ್ವದೇವಮುನೀಂದ್ರರೊಳು ನಾರದನು ನಾನಹೆನು ।
ಸರ್ವಗಂಧರ್ವರೊಳ ಗುತ್ತಮ
ಸರ್ವತೋಮುಖ ಚಿತ್ರರಥ ನಾಂ
ಸರ್ವಸಿದ್ಧರ ನಿವಹದೊಳು ನಾಂ ಕಪಿಲಮುನಿಯೆಂದ ॥ ೨೬

ತುರಗದೊಳ ಗಮೃತದಲಿ ಜನಿಸಿದ
ಸುರರಧಿಪನುಚ್ಚೈಶ್ರವವು ದಿ
ಕ್ಕರಿಗಳೊಳಗೈರಾವತವು ನಾನೇ ನಿದಾನಿಸಲು ।
ನರರೊಳಗೆ ಪಟ್ಟವನು ಧರಿಸಿದ
ಹಿರಿಯರನು ನಾನಾಗಿ ಲೋಕವ
ಪೊರೆಯುತಿಹೆ ಯುಗಧರ್ಮದಲಿ ಕಲಿ ಪಾರ್ಥ ಕೇಳೆಂದ ॥ ೨೭

ಆಯುಧಂಗಳೊಳಧಿಕವಹ ವ
ಜ್ರಾಯುಧವು ನಾನಹೆನು ಕರವಿಂ
ದಾಯುತದ ಧೇನುಗಳೊಳಗೆ ಸುರಧೇನು ನಾಂ ದಿಟಕೆ ।
ಈಯುದಯಿಸುವ ಪ್ರಜೆಯ ಜನನದು
ಪಾಯವಹ ಕಂದರ್ಪ ನಾನಹೆ
ನಾಯತದ ವಾಸುಕಿಯು ನಾಂ ಸರ್ಪಂಗಳೊಳಗೆಂದ ॥ ೨೮

ವರಮಹಾನಾಗರುಗಳೊಳು ನಾಂ
ಒರಿಯನಂತನು ಜಲಚರಂಗಳೊ
ಳರಸೆನಿಸುತಿಹ ವರುಣ ನಾನೇ ಪಿತೃಗಣಂಗಳೊಳು ।
ಅರಿಯಮನು ನಾನಾಗಿಹೆನು ಕೇ
ಳುರುತರದ ದಂಡಿಸುವರವರೊಳು
ವರಕೃತಾಂತನು ನಾನು ತಿಳಿ ನೀನೆಂದನಸುರಾರಿ ॥ ೨೯

ವೀರದೈತ್ಯರೊಳಮಲಭಕ್ತನು
ವಾರಪ್ರಹ್ಲಾದನು ಕಣಾ ನಾಂ
ಕಾರಣಂಗಳ ನೆರವಿಯೊಳು ಕಾಲಾತ್ಮನಾಗಿಹೆನು ।
ಕ್ರೂರಮೃಗಸಂತತಿಯೊಳಗ್ಗದ
ಶೂರಸಿಂಹನು ನಾನು ಖಗಕುಲ
ಸೇರುವೆಯೊಳು ಗರುತ್ಮನಾಗಿಹೆ ನೆಂದನಸುರಾರಿ ॥ ೩೦

ಪಾವನವ ಮಾಡುವರೊಳುತ್ತಮ
ಪಾವನದ ಮಾರುತನು ಕೈದುವ
ಭಾವದಿಂ ಧರಿಸುವರೊಳಗ್ಗದ ರಾಮನಾಗಿಹೆನು ।
ಈವಿವಿಧಮತ್ಸ್ಯಂಗಳೊಳು ಸಂ
ಭಾವಿಸಲು ನಾಂ ಮಕರ ನದಿಗಳೊ
ಳಾವಿಶೇಷದ ಗಂಗೆಯಾಗಿಹೆ ನಂದನಸುರಾರಿ ॥ ೩೧

ಮೊದಲು ನಡು ಕಡೆ ನಾನು ಸೃಷ್ಟಿಯ
ಪದಕೆ ವರವಿದ್ಯಂಗಳೊಳು ನಿಜ
ಪದವನರಿವಧ್ಯಾತ್ಮ ವಿದ್ಯೆಯಸಿದ್ಧಿ ತಿಳಿ ನಾನು ।
ವಿದಿತವಾದಿಗಳಲ್ಲಿ ತತ್ವದ
ಪದವ ನಿರ್ಧರಿಸಿರುವ ವೇದಾಂ
ತದ ರಹಸ್ಯದ ವಾದವಾಗಿಹೆನೆಂದನಸುರಾರಿ ॥ ೩೨

ಅಕ್ಷರಗಳೊಳಕಾರ ನಾನೇ
ಶಿಕ್ಷೆ ವ್ಯಾಕರಣದ ಸಮಾಸದ
ಕಕ್ಷೆಯೊಳು ನೋಡುವೊಡೆ ದ್ವಂದ್ವಸಮಾಸವಾಗಿಹೆನು ।
ಅಕ್ಷಯದ ಕಾಲಸ್ವರೂಪನು
ಶಿಕ್ಷಿಸುವವರ ವಿಶ್ವತೋಮುಖ
ರಕ್ಷಕನು ಕಮಲಜನು ನಾಂ ಕೇಳೆಂದನಸುರಾರಿ ॥ ೩೩

ಮೃತ್ಯುನಾನೆಲ್ಲವನು ಭಕ್ಷಿಪ
ಮತ್ತೆ ಮುಂದಹ ವಸ್ತುಗಳಿಗು
ತ್ಪತ್ತಿನಾನಾಗಿಹೆನವರ ಹೆಚ್ಚು ಗೆಯಲಾಂ ಮುದದಿ ।
ಇತ್ತಲೀನಾರಿಯರೊಳಗ್ಗದ
ಕೀರ್ತಿ ಲಕ್ಷ್ಮಿ ಸರಸ್ವತಿಗಳಾ
ಸತ್ಯಧೃತಿ ಸ್ಮರಣೆ ನೆನಹು ವರಮೇಧೆ ನಾನೆಂದ ॥ ೩೪

ವರಬೃಹತ್ಸಾಮವು ಕಣಾ ನಾಂ
ಹಿರಿಯ ಸಾಮಂಗಳೊಳು ಛಂದದ
ಪರಿವಿಡಿಯ ಮಂತ್ರಂಗಳೊಳು ಗಾಯತ್ರಿನಾಂ ದಿಟದಿ ।
ಮೆರೆವ ಮಾಸಂಗಳೊಳು ನಾನೇ
ಸರಸವಹ ಮಾರ್ಗಶಿರ ಋತುಗಳೊ
ಳರಸೆನಿಸುವ ವಸಂತಋತು ನಾನೆಂದನಸುರಾರಿ ॥ ೩೫

ಠಕ್ಕರೊಳು ಜೂಜಾನು ತೇಜದಿ
ಮಿಕ್ಕಿಹವರೊಳು ತೇಜವಾಗಿಹೆ
ತಕ್ಕ ಸತ್ವವನುಳ್ಳವರಿಗಾಸತ್ವವಾಗಿಹೆನು ।
ಹೆಕ್ಕಳಿಪ ವ್ಯವಸಾಯವಂತರಿ
ಗಕ್ಕರಿನ ವ್ಯವಸಾಯ ನಾನು ಜ
ಯಕ್ಕೆ ಜಯವಾಗಿಹೆನು ನಾನೆಲೆ ಪಾರ್ಥಕೇಳೆಂದ ॥ ೩೬

ಯದುಕುಲದ ವೃಷ್ಣಿಗಳೊಳಾಂ ಬಂ
ದೊದವಿಹೆನು ವಸುದೇವತನಯನ
ಪದವಿಯಲಿ ಪಾಂಡವರೊಳರ್ಜುನದೇವನಾಗಿಹೆನು ।
ಮದವಳಿದ ಮುನಿಗಳೊಳು ನಾನೇ
ವಿದಿತವೇದವ್ಯಾಸನಾಗಿಹೆ
ತುದಿಗೆ ಕವಿಗಳೊಳಧಿಕ ಶುಕ್ರಾಚಾರ್ಯ ನಾನೆಂದ ॥ ೩೭

ದಂಡಿಸುವರೊಳಗಧಿಕತರವಹ
ದಂಡರೂಪನು ನಾನು ಗೆಲವನು
ಬಂಡಣದಿ ಬಯಸುವರಿಗಾನತಿ ನೀತಿಯಾಗಿಹೆನು ।
ಮಂಡಲದ ಗೋಪ್ಯಂಗಳೊಳಗು
ದ್ದಂಡವಹ ಮೌನಸ್ವರೂಪನ
ಖಂಡವಿಮಲಜ್ಞಾನಿಗಳಿಗಾ ಜ್ಞಾನವಾಗಿಹೆನು ॥ ೩೮

ಸಕಲಭೂತಕ್ಕಾವುದೊಂದ
ವ್ಯಕುತ ಕಾರಣವೆನಿಸುತಿಹುದಾ
ನಿಖಿಲವಿಶ್ವದ ಬೀಜವಾನೆನಿಸಿರ್ಪೆನೆನ್ನಿಂದ ।
ಪ್ರಕಟದಿಂ ಬೇರೆನಿಸಿ ತೋರುವ
ಸಕುತಿವಿಡಿದ ಚರಾಚರಂಗಳು
ಯುಕುತಿಯಿಂ ಭಾವಿಸಲು ದಿಟಕಿಲ್ಲೆಂದನಸುರಾರಿ ॥ ೩೯

ಎಲೆಪರಂತಪ ದಿವ್ಯವೆನಿಸುವ
ಹಲವುಬಗೆಯ ವಿಭೂತಿವಿಭವಕೆ
ಸಲೆ ಮೊದಲು ಕಡೆಯಿಲ್ಲವೆನ್ನಯ ಯೋಗಮಾಯೆಗಳ ।
ಚೆಲುವೆನಿಸುವ ವಿಭೂತಿವಿಸ್ತರ
ಜಲಧಿಯೊಳು ನಾಂ ನಿನಗೆ ಪೇಳ್ದೆನು
ಕೆಲವ ಮಿಕ್ಕವಿಭೂತಿವಿಭವಕೆ ಲೆಕ್ಕವಿಲ್ಲೆಂದ ॥ ೪೦

ಆವವಾವುವು ವಿಭವಚೆಲುವಿಂ
ತೀವಿಕೊಂಡಿಹ ತೇಜದುನ್ನತಿ
ಭಾವದಿಂ ನೆರೆ ಮೆರೆಯುತಿಹುವಾ ಸಕಲವಸ್ತುಗಳು ।
ಭಾವಿಸಲು ಕೇಳೆನ್ನ ಘನತೇ
ಜೋವಿಶೇಷಾಂಶಂಗಳಿಂದುಪ
ಜೀವಿಸುತಲಿಹುವೆಂದು ತಿಳಿ ನೀನೆಂದನಸುರಾರಿ ॥ ೪೧

ಅಲ್ಲದಿರೆ ಮೇಣ್ಣಿನಗೆ ನಾಂ ಪೇ
ಳ್ದಿಲ್ಲವನು ನೀನರಿಯುವದರಿಂ
ದೆಲ್ಲ ಫಲ ನಿನಗೇನು ನೆಲೆಯಾಗಿರದು ಪೇಳುವೊಡೆ ।
ನಿಲ್ಲದೆನ್ನೊಂದೇಕದೇಶದ
ಸಲ್ಲಲಿತಸತ್ವದಲಿ ಜಗವಿದ
ನೆಲ್ಲವನು ಧರಿಸಿಹೆನು ಭಾರತಮಲ್ಲ ಕೇಳೆಂದ ॥ ೪೨

- ಇಂತು ವಿಭೂತಿಯೋಗವೆಂಬ ಹತ್ತನೇ ಅಧ್ಯಾಯ ಸಂಪೂರ್ಣ -

## ಹನ್ನೊಂದನೇ ಅಧ್ಯಾಯ - ವಿಶ್ವರೂಪಸಂದರ್ಶನಯೋಗ

---

ಸೂಚನೆ ॥ ಉಭಯಬಲಮಧ್ಯದಲಿ ವಿಶ್ವ
ಪ್ರಭು ಮುರಾರಿ ನರಂಗೆ ತನ್ನಯ
ವಿಭವವೆನಿಸುವ ವಿಶ್ವರೂಪವ ನೊಲಿದು ತೋರಿಸಿದ ॥

ಬಿನ್ನವಿಸಿದನು ಪಾರ್ಥ ಕೇಳಿರೆ
ಚಿನ್ಮಯನೆ ಅಧ್ಯಾತ್ಮವೆನಿಸುವ
ಸನ್ನಿಹಿತವತಿಗೋಪ್ಯವೆನಿಸುವ ಯೋಗವನು ನೀನು ।
ಎನ್ನ ಪರಮಾನುಗ್ರಹಾರ್ಥದಿ
ಮುನ್ನ ಹೇಳಿದುದನುಕೇಳ
ಲ್ಕೆನ್ನೊಳಿರ್ದಜ್ಞಾನತೊಲಗಿತು ದೇವ ಕೇಳೆಂದ ॥ ೧

ದೇವ ಕಮಲದಳಾಕ್ಷ ನಿನ್ನಿಂ
ದೀವಿವಿಧಭೂತಂಗಳುದಯವು
ಜೀವನವು ಮೃತಿ ನಿನ್ನದೆಸೆಯಿಂದಾಗುತಿಹುದೆಂದು ।
ದೇವ ನಿನ್ನಕ್ಷಯಮಹಿಮೆಯನು
ಭಾವದಿಂ ನಾಂ ಕೇಳಿ ತಿಳಿದೆನು
ಪಾವನೋತ್ತಮವಿಶ್ವರೂಪವ ತೋರಬೇಕೆಂದ ॥ ೨

ಪರಮಪುರುಷೋತ್ತಮನೆ ನಿನ್ನಯ
ವರವಚನದಿಂದಾವಪರಿಯಲಿ
ಧರಿತರೂಪವನೊರೆದೆ ಯಾಪರಿ ತಪ್ಪದಿದು ನಾನು ।
ದರುಶನವ ಮಾಡಲ್ಕೆ ಬಯಸಿದೆ
ಪರಮವೆನಿಸುವ ನಿನ್ನ ಮಹದೈ
ಶ್ವರಿಯ ರೂಪವ ತೋರಬೇಕೆನುತಿರ್ದನಾಪಾರ್ಥ ॥ ೩

ಯೋಗಮಾಯಾಧೀಶ ಎನ್ನಿಂ
ದೀಗ ನಿನ್ನೈಶ್ವರ್ಯರೂಪವು
ಬೇಗ ಕಾಣಲು ಶಕ್ಯವಹುದೆಂತೆಂದು ಚಿತ್ತದಲಿ ।
ಈಗ ನೀಂ ನೆರೆ ಬಗೆದೆಯಾದೊಡೆ
ಯಾಗರುವ ನಿಜ ನಿತ್ಯ ನಿರ್ಮಲ
ಯೋಗರೂಪವನೆನಗೊಲಿದು ತೋರೆಂದನಾ ಪಾರ್ಥ ॥ ೪

ಎಂದು ಬಿನ್ನಹಮಾಡಲಾಗೋ
ವಿಂದನೆಂದನು ಪಾರ್ಥ ನಾನಾ
ಛಂದದಿಂದಹ ಪಲವುವರ್ಣದ ಪಲವುತೆರನಾದ ।
ಕುಂದದೆನ್ನ ಸಹಸ್ರಸಂಖ್ಯೆಯೊ
ಳೊಂದಿ ಮೆರೆದಿಹ ದಿವ್ಯಮೂರ್ತಿಗ
ಳಂದವನು ಸುಖದಿಂದ ನೀಂ ನೋಡೆಂದನಸುರಾರಿ ॥ ೫

ಎನ್ನವರಮೂರ್ತಿಯಲಿಕಾಂಬವು
ಭಿನ್ನವಾದಚರಾಚರಂಗಳು
ಸನ್ನಿಹಿತವಾಗೊಂದುಠಾವಿನೊಳಿರ್ಪವೆಲ್ಲವನು ।
ಅನ್ಯವಾವುದ ನೋಡಬಯಸುವೆ
ಯಿನ್ನದೆಲ್ಲವಭೀತಿಯಿಲ್ಲದೆ
ನಿನ್ನಮನದೊಲವಿಂದನೀಂನೋಡೆಂದನಸುರಾರಿ ॥ ೬

ದ್ವಾದಶಾದಿತ್ಯರನು ವಸುಗಳ
ನಾದಿರುದ್ರರ ನಶ್ವಿನಿಗಳನು
ಸಾದರದೊಳೇಕೋನ ಪಂಚಾಶನ್ಮರುತ್ತಗಳ ।
ವೇದಸಿದ್ಧರ ನೆಲ್ಲರನು ನೀ
ನಾದಿಯಲಿ ಕಂಡರಿಯದಿಹಹಲ
ವಾದಚಿತ್ರದ ಮೂರ್ತಿಗಳ ನೋಡೆಂದನುಸುರಾರಿ ॥ ೭

ನಿನ್ನ ತಾಮಸ ದೃಷ್ಟಿಯಿಂದವೆ
ಯೆನ್ನ ನಿಜರೂಪವನು ನೋಡ
ಲ್ಕಿನ್ನು ನೀ ನಾರದಕತದಿವರದಿವ್ಯದೃಷ್ಟಿಯನು ।
ಸನ್ನಿಹಿತವಾಗಿಯೆ ಕೊಡುವೆ ನೀ
ನೆನ್ನ ಯೋಗೈಶ್ವರ್ಯವನು ಸಂ
ಪನ್ನವಾಗಿಯೆ ನೋಡುನೋಡೆಂದನು ಮುರಧ್ವಂಸಿ ॥ ೮

ಈಪರಿಯ ನುಡಿದದರನಂತರ
ವಾ ಪರಮಯೋಗಾಧಿಪನೆ ನಿ
ಷ್ಪಾಪರಮಪುರುಷೋತ್ತಮನು ಪಾರ್ಥಂಗೆ ಕರುಣದಲಿ ।
ತಾಪರಕೆಪರತರವೆನಿಪ ನಿ
ರ್ಲೇಪಯೋಗೈಶ್ವರ್ಯವೆನಿಸುವ
ರೂಪನೆರೆ ತೋರಿಸಿದನೈ ಧೃತರಾಷ್ಟ್ರಕೇಳೆಂದ ॥ ೯

ಹಲವುಮುಖನೇತ್ರಂಗಳಿರುತಿಹ
ಹಲವು ದಿವ್ಯಾಭರಣ ತೊಡಿಗೆಯು
ತಳೆದುನೆಗಹಿದ ಥಳಥಳಿಪ ದಿವ್ಯಾಯುಧಾವಳಿಯ ।
ಹಲವು ಪರಿಯ ಮಹತ್ತರಾದ್ಭುತ
ಗಳನು ತೋರುವ ದಿವ್ಯರೂಪವ
ನೊಲಿದುತಾ ಕೈಕೊಂಡನೈಸುರನಿಕರ ಬೆರಗಾಗೆ ॥ ೧೦

ದಿವ್ಯವನಮಾಲೆಗಳೊಳೊಪ್ಪುವ
ದಿವ್ಯವಸ್ತ್ರಂಗಳನು ಧರಿಸಿದ
ದಿವ್ಯಪರಿಮಳವೆಸೆವ ವರಗಂಧಾನು ಲೇಪನದ ।
ದಿವ್ಯಸಕಲೈಶ್ವರ್ಯಮಯವಹ
ದಿವ್ಯತೇಜದಿ ಮೆರೆವನಂತನ
ನವ್ಯಯನ ವರವಿಶ್ವರೂಪನ ಕಂಡನಾ ಪಾರ್ಥ ॥ ೧೧

ಗಗನದಲಿ ಸಾಸಿರದಿವಾಕರ
ರೊಗೆಯಲೊಂದೇಬಾರಿತೋರುವ
ಮಿಗಿಲೆನಿಪ ಬೆಳಗಾವನೊಬ್ಬನ ವಿಶ್ವಮೂರುತಿಯ ।
ಹೊಗರುಗುವ ಪ್ರಭೆಗೆಣೆಯಹರೆತಾಂ
ಜಗದೊಳೆಣೆಯಹುದಲ್ಲದುಳಿದುದ
ಬಗೆವರೆನ್ನಳವಲ್ಲವೈ ಧೃತರಾಷ್ಟ್ರಕೇಳೆಂದ ॥ ೧೨

ಆ ಸಮಯದಲಿ ದೇವ ದೇವನ
ಭಾಸುರ ಶ್ರೀಮೂರ್ತಿಯೊಂದರ
ಲೀ ಸಮಸ್ತ ಚರಾಚರಂಗಳು ಹಲವು ತೆರನಾದ ।
ವಾಸನೆಗಳಿಂ ಬೇರೆ ಬೇರೆ ವಿ
ಶೇಷವಾಗಿಹುದೆಲ್ಲವನು ಲ
ಕ್ಷ್ಮೀಶನಲಿ ಕಲಿಪಾರ್ಥ ಕಂಡನು ಭೂಪಕೇಳೆಂದ ॥ ೧೩

ಬಳಿಕ ವಿಸ್ಮಿತನಾಗಿ ವಂದಿಸಿ
ಫಲುಗುಣನು ಶಿವಶಿವ ಎನುತತನು
ಪುಳಕದಿಂದುಬ್ಬರಿಸೆ ದೇವನನೋಡಿ ಕೈಮುಗಿದು ।
ನಳಿನನಾಭಮುಕುಂದಲಕ್ಷ್ಮೀ
ನಿಳಯನೀನೇ ಬಲ್ಲೆ ನಿನ್ನನು
ತಿಳಿಯರನ್ಯರೆನುತ್ತಬಿನ್ನೈಸಿದನು ಕಲಿಪಾರ್ಥ ॥ ೧೪

ಕಂಡೆ ನಿನ್ನಯಮೂರ್ತಿಯಲಿ ಬ್ರ
ಹ್ಮಾಂಡದಿರವನು ಭೂತಜಾತಿಯ
ಹಿಂಡುಹಲವನು ದೇವತೆಗಳನು ಬ್ರಹ್ಮದೇವರು ।
ಮಂಡಳಿಸಿ ಪದ್ಮಾಸನದೊಳಿಹ
ಖಂಡಪರಶುವ ನಖಿಳಋಷಿಗಳ
ತಂಡವನು ಮುರಗಾಧಿಪರ ನೆಲೆದೇವ ಕೇಳೆಂದ ॥ ೧೫

ಹಲವು ಮುಖನೇತ್ರವನು ಧರಿಸಿದ
ಹಲವುದರ ಬಾಹುಗಳ ತಾಳ್ದ
ಹಲವುರೂಪವ ನಿನ್ನಕಂಡೆನು ಹಲವು ದೆಸೆಗಳಲಿ ।
ಎಲೆ ವಿಮಲ ವಿಶ್ವೇಶ ನಿನ್ನಯ
ಸಲೆ ಮೊದಲುನಡುಕಡೆಯ ಸೀಮೆಯ
ನೆಲೆಯಂ ಕಾಣೆನು ವಿಶ್ವರೂಪ ನಮೋ ನಮೋ ಎಂದ ॥ ೧೬

ಥಳಥಳಿಪರತ್ನದ ಕಿರೀಟದ
ತಳೆದಚಕ್ರದ ಗದೆಯಧರಿಸಿದ
ಹಲವುದೆಸೆಯಲಿ ಬೆಳಗಿತೇಜೋರಾಶಿಯಾಗಿರ್ಪ ।
ಜ್ವಲಿಸುತಿರ್ಪನಲಾರ್ಕರಂತಿರೆ
ಹೊಳೆಹೊಳೆವ ನೆರೆನೋಡಬಾರದ
ತಿಳಿಯಲರಿಯದ ನಿನ್ನ ಮೂರ್ತಿಯ ಕಂಡೆನಾನೆಂದ ॥ ೧೭

ಅರಿಯಬೇಕಾಗಿಹ ಪರಮಮ
ಕ್ಷರಮೆನಿಪೆ ನೀಂ ನಿಜವು ಸಚರಾ
ಚರದ ವಿಶ್ವಕೆ ಪರಮೆನಿಸುವ ನಿಧಾನವಾಗಿರ್ಪೆ ।
ನೆರೆ ಸಮೆಯದಿಹ ನಿತ್ಯಧರ್ಮವ
ನಿರದೆ ಕಾವ ಪುರಾಣಪುರುಷನು
ಕುರುಹಳಿದ ಪರಬೊಮ್ಮ ನೀನೆಂದೆಮ್ಮ ಮತವೆಂದ ॥ ೧೮

ಆದಿಮಧ್ಯಾಂತಂಗಳಿಲ್ಲದ
ವಾದಕೊಳ್ಳಗನಂತವೀರ್ಯದ
ಕೈದುವಿಡಿದಿಹ ಹಲವುತೋಳ್ಗಳ ವಿಶ್ವಭಾಸುರದ ।
ಬೀದಿವರಿವ ಹುತಾಶವದನದ
ವೇದಮಯ ಶಶಿಸೂರ್ಯನೇತ್ರದ
ಭೇದಹೊದ್ದದ ದೇವ ನಿನ್ನನು ಕಂಡೆ ನಾನೆಂದ ॥ ೧೯

ಎಲೆಮಹಾತುಮ ಗಗನಭೂತಳ
ದೊಳಗು ದಶದಿಕ್ಕುಗಳು ನಿನ್ನಿಂ
ದಳಿಯದಿನಿಸುಂ ತುಂಬಿಕೊಂಡಿದೆ ಯೀಮಹಾದ್ಭುತವ ।
ನೆಲೆಯ ನಿನ್ನಯ ರೂಪನೀಕ್ಷಿಸಿ
ಹಲವು ಜಗ ಸಂತಾಪಪಡುತಿದೆ
ಸಲಹಿಕೊಳ್ಳೈ ಮೂಜಗವ ನೀ ನೆಂದನಾಪಾರ್ಥ ॥ ೨೦

ಈ ಸಕಲಸುರನಿಕರ ನಿನ್ನಯ
ಭಾಸುರಶ್ರೀಮೂರ್ತಿಯಲ್ಲಿ ಪ್ರ
ವೇಶಿಸುತಲಿದೆ ಕೆಲವರು ಭಯದಿಂದ ಮುಗಿದಕೈಯವರು ।
ಈಶ ಬಿನ್ನೈಸುತ್ತಲಿಹರು ಮು
ನೀಶಸಿದ್ಧರು ಸ್ವಸ್ತಿಯೆಂದು ಮ
ಹಾಸದರ್ಥಸ್ತುತಿಯ ಮಾಡುತ್ತಿಹರು ನೋಡೆಂದ ॥ ೨೧

ನಿಂದು ರುದ್ರಾದಿತ್ಯವಸುಗಳು
ಮುಂದೆ ಸಾಧ್ಯಮರುದ್ಗಣಂಗಳು
ಸಂದವಿಶ್ವೇದೇವರಶ್ವಿನಿದೇವರುಷ್ಣಪರು ।
ಕುಂದದಾಗಂಧರ್ವಯಕ್ಷರು
ಬಂದು ರಾಕ್ಷಸರಖಿಲಸಿದ್ಧರು
ಮಿಂದು ನೆರೆ ಬೆರಗಾಗಿ ನಿನ್ನನು ನೋಡುತಿಹರೆಂದ ॥ ೨೨

ಹಲವುಮುಖ ಹಲವಕ್ಷಿತೋಳ್ಗಳು
ಹಲವುತೊಡೆ ಹಲವಂಘ್ರಿಯುದರವು
ಹಲವುದಾಡೆಗಳಿಂದ ಭೀಕರವಾಗಿ ತೋರುತಿಹ ।
ಬಲಿದ ನಿನ್ನೀ ಸ್ಥೂಲರೂಪಿನ
ನಿಲವನೀಕ್ಷಿಸುತಖಿಲಲೋಕವು
ಹೊಲಬುಗೆಡುವಂದದಲಿ ನಾ ಹೊಲಬಳಿದೆ ನೋಡೆಂದ ॥ ೨೩

ನಭವನಳ್ಳಿರಿಯುತ್ತ ಬೆಳಗುತ
ವಿಭವದಿಂದಿಹ ಹಲವುವರ್ಣ
ಪ್ರಭೆಯಧರಿಸಿದ ತೆಗೆದವದನದ ದೀಪ್ತಲೋಚನದ ।
ಪ್ರಭುವೆ ನಿನ್ನನು ಕಂಡು ಮನದಲಿ
ರಭಸಗುಂದಿದ ನೈ ಧೃತಿಯನಾ
ನಭಯಸುಖವನು ಪಡೆಯದಿಹೆ ನಲಿವಿಭುವೆ ಕೇಳೆಂದ ॥ ೨೪

ಪ್ರಳಯಕಾಲಾನಲನ ಹೋಲುವ
ಹೊಳೆವ ದಾಡೆಗಳಿಂದ ಭುವನಕೆ
ಸಲೆ ಭಯಂಕರವಾದ ನಿನ್ನ ಮುಖಂಗಳನು ನೋಡಿ ।
ಹೊಲಬನರಿಯೆನು ಸುಖವ ಪಡೆಯೆನು
ಹಲವುದೇವರ ದೇವ ಲೋಕಕೆ
ನೆಲೆಯೆನಿಸಿದಚ್ಯುತನೆ ನೀನು ಪ್ರಸನ್ನನಾಗೆಂದ ॥ ೨೫

ಇದಿರಲಿದೆ ಧೃತರಾಷ್ಟ್ರನಂದನ
ರದುಭುತದ ನೃಪರುಗಳು ಭೀಷ್ಮನು
ಕದನಗಲಿಯುಹ ದ್ರೋಣ ಸೂರ್ಯಸುತಾದಿಪಟುಭಟರು ।
ಒದವಿ ತೋರುವ ನಮ್ಮ ಬಲದ
ಗ್ಗದ ನೃಪಾಲರು ಸಹಿತ ನಿನ್ನಯ
ವದನಸಮ್ಮುಖಕೈದಿ ಬಂದರು ದೇವ ಕೇಳೆಂದ ॥ ೨೬

ತವಕಿಸುತಭೂಮಿಪಾಲರು
ಧವಳದಾಡೆಗಳಿಂ ಭಯವಮಾ
ಡುವ ವಿಶಾಲದ ನಿನ್ನ ವದನದ ಕುಹರದೊಳು ಹೊಗಲು ।
ಅವರೊಳಗೆ ಕೆಲಕೆಲರು ಹಲ್ಲಿನ
ವಿವರದಲಿ ನೆರ ಸಿಕ್ಕಿ ತಲೆಯೊಡೆ
ದವರು ಜೋಲುತಲಿಹುದ ಕಂಡತಿಭೀತಿಯಾಯ್ತೆಂದ ॥ ೨೭

ಹಲವುತೆರದ ನದೀನದಂಗಳ
ಉಲಿಯುತಿರ್ಪ ಜಲಪ್ರವಾಹವು
ನೆಲೆಯೆನಿಸಿದ ಸಮುದ್ರಕಭಿಮುಖವಾಗಿ ಪೋಪಂತೆ ।
ಬಲಭುಜದ ನರಲೋಕವೀರರು
ಜ್ವಲಿಸುತಿರುತಿಹ ನಿನ್ನ ವದನ
ಹೊಳಲ ಹೊಗುತಿರ್ದಪರು ಹೊಸತಿದು ದೇವ ಕೇಳೆಂದ ॥ ೨೮

ಉರಿಯ ಕಿಚ್ಚ ಪತಂಗಜಾತಿಯು
ನೆರವಿ ತಮ್ಮ ವಿನಾಶಕೋಸುಗ
ಭರದಿ ಹೋಗುವಂದದಲಿ ಲೋಕವು ಮಡಿಯಲೋಸುಗರ ।
ಹರಿಯೆ ನಿನ್ನ ಮುಖಂಗಳನು ಬಂ
ದುರವಣಿಸಿ ನೆರೆ ಹೋಗುತಲಿದೆ ನಿ
ನ್ನಿರವನರಿಯೆನು ಕರುಣಿಸೈ ಕಾರುಣ್ಯನಿಧಿಯೆಂದ ॥ ೨೯

ಉರಿಯುತಿಹ ವಕ್ತ್ರಂಗಳಿಂದವೆ
ನೆರೆದಖಿಲ ಲೋಕಂಗಳನು ಮಿಗೆ
ಭರದಲೆಲ್ಲಾ ದೆಸೆಗಳನು ನೀನೆಕ್ಕಿ ನೋಡುತಿಹೆ ।
ಹರಿವ ಕಾಂತಿಗಳೀಜಗಂಗಳ
ಪರೆದು ತೀವಿ ಸಮಗ್ರಮಗ್ರದ
ಉರುಹುತಿವೆ ನಾನೇನನೆಂಬೆನು ಹರಿಹರೀ ಎಂದ ॥ ೩೦

ದೇವ ನಿನ್ನಗೆ ನಮೋನಮೋ ಉ
ಗ್ರಾವತಾರದ ರೂಪಿನೊಪ್ಪುವ
ದೇವ ನೀನಾರೆನಗೆ ಪೇಳು ಪ್ರಸನ್ನಮುಖನಾಗಿ ।
ದೇವ ನಿನ್ನನು ದಿಟಕರಿಯೆ ನೀ
ನಾವನೆಂಬುದ ನಿನ್ನ ಕೆಲಸವ
ಭಾವಶುದ್ಧಿಯೊಳರಿಯಲಿಚ್ಛೈಸುವೆನು ನಾನೆಂದ ॥ ೩೧

ಸೃಷ್ಟಿಗೆ ತಾ ಪರಮೇಷ್ಠಿ ನುಡಿದನು
ಗತಿಯ ಕೇಳ್ಳೈ ಪಾರ್ಥ ಲೋಕ
ಕ್ಷಿತಿಯ ಸಂಹರಿಸಲ್ಕೆ ಹೆಚ್ಚಿದ ಕಾಲನೈನಾನು ।
ಕ್ಷಿತಿಯೊಳೀಲೋಕಂಗಳನು ನೆರೆ
ಹತವಮಾಡಲು ಬಂದೆ ಸಮರ
ಪ್ರತಿಪ ನೀಕೈಕೊಳ್ಳದೀ ನೃಪರುಳಿವರಲ್ಲೆಂದ ॥ ೩೨

ಅದುನಿಸುತ್ತಧಿ ನೇಳು ಹಗೆಗಳ
ಕದನದೊಳು ನೆರೆ ಜಯಿಸಿ ಕೀರ್ತಿಯ
ಪದವ ಪಡೆ ಭೋಗಿಸು ಸಕಲಸಾಮ್ರಾಜ್ಯಸಂಪದವ ।
ಮೊದಲಲಿವರೆನ್ನಿಂದ ಹತರಿ
ನ್ನಿದಕೆ ನೀನು ನಿಮಿತ್ತಮಾತ್ರವು
ಪದುಳದಿಂದಾಗೈ ಧನಂಜಯ ಎಂದನಸುರಾರಿ ॥ ೩೩

ದ್ರೋಣನನು ಭೀಷ್ಮನನು ಮೆರೆವೀ
ಕ್ಷೋಣಿಗೊಡೆಯಜಯದ್ರಥನ ನೆರೆ
ಜಾಣನಹ ರವಿಸೂನು ಮೊದಲಾದಖಿಳವೀರರನು ।
ಮಾಣದೆನ್ನಿಂದಳಿದವರುಗಳ
ಕೇಣವಿಲ್ಲದೆ ಕಡಹು ರಣದಲಿ
ಪೂಣೆಮೊಕ್ಕಿರಿಯಲು ಗೆಲುವೆ ನೀನಂಜಬೇಡೆಂದ ॥ ೩೪

ಮತ್ತೆ ಕೇಳ್ಧೃತರಾಷ್ಟ್ರ ಫಲುಗುಣ
ಚಿತ್ತ ವರಕೇಶವನ ವಾಕ್ಯದ
ಬಿತ್ತರಂಗಳ ಕೇಳಿ ನಡುಗುತ್ತೆರಗಿ ಕೈಮುಗಿದು ।
ಮತ್ತೆ ಭಯದಿಂ ವಂದಿಸುತ ತಲೆ
ಗುತ್ತಿ ಗಂಟಲ ಸೆರೆಬಿಗಿದು ಪುರು
ಷೋತ್ತಮನ ಹೊಗಳಿದನು ಸಾತ್ವಿಕಭಾವಭಕ್ತಿಯಲಿ ॥ ೩೫

ಮತಿಮೊದಲು ಸಕಲೇಂದ್ರಿಯಕೆ ನಿಜ
ಪತಿಯೆನಿಸುತಿಹ ನಿನ್ನವರಸಂ
ಸುತವೆನಿಸುತಿಪ ಕೀರ್ತಿಯಿಂ ಜಗ ತುಷ್ಟಿಪಡುತಿಪುದು ।
ಅತಿಹರುಷಮಂ ತಳೆದು ಭಕ್ತಿ
ವ್ರತರ ಸಿದ್ಧರ ನೆರವಿ ವಂದಿಪಿ
ಸುತಿಸುತಿದೆ ರಾಕ್ಷಸರು ದೆಸೆಗೆಟ್ಟೋಡುತಿಹರೆಂದ ॥ ३६

ದೇವದೇವ ನನಂತನೀಭುವ
ನಾವಳಿಗಳಾಧಾರ ಸದಸ
ದ್ಭಾವವಹಜಗ ನಿತ್ಯವಹ ಪರಬೊಮ್ಮ ನೀನಾಗಿ ।
ಆವಿರಂಚಂಗಾದಿಯೆನಿಸುವ
ದೇವ ನಿನಗೀ ಸಕಲಲೋಕವ
ದಾವಪರಿಯಿಂ ದೆರಗದಿರಬಹುದೆಂದನಾಪಾರ್ಥ ॥ ३७

ಆದಿದೇವ ಪುರಾಣಪುರುಷನು
ವೇದವೇದ್ಯನು ಜಗಕೆ ಶಾಶ್ವತ
ವಾದ ನಿಧಿ ನೀ ಶಾಸ್ತ್ರತತ್ವವಿದಾತುಮನು ನೀನು ।
ಸಾಧಿಸುವ ಪರವಸ್ತು ನಿನ್ನಿಂ
ದಾದಿಯಲಿ ಜಗ ರಚಿಸಿಕೊಳುತಿಹು
ದಾದರಿಸಿಕೊಳುತಿಹುದನಂತನೆ ಸಚ್ಚಿದಾತ್ಮಕನೇ ॥ ३८

ಮಾರುತನು ಯಮನಗ್ನಿ ವರುಣನು
ದಾರಶಶಿ ಕಮಲಜನು ನೀನೇ
ಧೀರಪ್ರಪಿತಾಮಹನು ಸಕಲಚರಾಚರವು ನೀನೇ ।
ಶೌರಿ ನಿನಗೆ ನಮೋನಮೋ ವಿ
ಸ್ತಾರದಿಂದವೆ ಮರಳಿ ಸಾಸಿರ
ಬಾರಿ ಪುನರಪಿ ಯುಂ ನಮೋನಮಃ ಎಂದನಾ ಪಾರ್ಥ । ३९

ಎಲೆಹರಿಯೆ ಕಡೆಯಿಲ್ಲದಿಹ ನಿ
ಶ್ಚಲಿತವೀರ್ಯನು ಬಹುಪರಾಕ್ರಮಿ
ಹಲವನೆಲ್ಲವ ವ್ಯಾಪಿಸುತಲಿಹೆ ಸರ್ವಮುಂ ನೀನೇ ।
ಕೆಲಬಲಂಗಳ ಲಿದಿರಿನಲಿ ಮ
ತ್ತೊಲಿದು ಬೆಂಬಾಗದಲಖಿಳದೆಸೆ
ಗಳಲಿ ನಿನಗೆರಗುವೆನು ಸರ್ವಾತ್ಮಕನೆ ನಮ ಎಂದ ॥ ೪೦

ಮಂಗಳಾತ್ಮಕ ನಿನ್ನ ಮಹಿಮೆಯ
ನಿಂಗಿತದಿ ನೆರೆಯರಿಯದೇ ನಾಂ
ಹಿಂಗದಿರುವಜ್ಞಾನದಿಂ ದತಿಮೋಹವಶದಿಂದ ।
ಸಂಗಡಿಗ ನೀನೆಂದು ಬಗೆದು
ಲ್ಲಂಘಿಸುತ ಯಾದವನೆ ಕೃಷ್ಣನೆ
ಯಂಗಸಖ ನೀನೆಂದುದನು ನೀಂ ಕ್ಷಮಿಸಬೇಕೆಂದ ॥ ೪೧

ಆವುದೊಂದಪಹಾಸಕೋಸುಗ
ದೇವ ನೀ ನುಣುವಲ್ಲಿ ವಿಹರಿಪ
ತಾವಿನಲಿ ಕುಳ್ಳಿರ್ಪೆಡೆಯು ಲಾಶಯನದೆಡೆಗಳಲಿ ।
ಭಾವನೆಂ ದೆಕ್ಕಟಿಯ ಲಂತುಟು
ದೇವ ನಿನ್ನಿದಿರಿನಲಿ ಹಲವನು
ನಾವು ನುಡಿದ ದುರುಕ್ತಿಗಳ ನೀಂ ಕ್ಷಮಿಸಬೇಕೆಂದ ॥ ೪೨

ತಂದೆ ನೀನು ಚರಾಚರಂಗಳಿ
ಗಿಂದು ಲೋಕಕೆ ಪೂಜ್ಯಗುರು ವರ
ಬಂಧು ನೀ ತ್ರೈಲೋಕ್ಯದೊಳಗಪ್ರತಿಮನಹ ನಿನಗೆ ।
ಇಂದು ಸಮನಿಲ್ಲಾಗಿ ನೆರೆ ನಿ
ನ್ನಿಂದಧಿಕನಿನ್ನಾವನುಂಟು ಮು
ಕುಂದ ನಿನ್ನಿಂ ಪಿರಿದು ಮತ್ತೊಂದಿಲ್ಲ ಕೇಳೆಂದ ॥ ೪೩

ಅದುನಿಮಿತ್ತೀತನುವ ನಿನ್ನಯ
ಪದಕೆ ಬಾಗಿಸಿ ವಂದಿಸುತ ನಾ
ಮುದದಿ ಕ್ಷಮೆಗೊಂಬೆನು ಸುತಿಗಳಿಗೆ ಪಾತ್ರನಹ ನಿನ್ನ ।
ಸುದತಿಯಪರಾಧವನು ಪತಿ ಪಿತ
ನುದಯಿಸಿದ ಪುತ್ರನಲಿ ಕೊರತೆಯ
ವಿದಿತದಿಂ ಸಖಿ ಸಖನ ರಕ್ಷಿಸುವಂತೆ ಸಲಹೆನ್ನ । ೪೪

ಮುನ್ನ ಕಾಣದ ರೂಪ ಕಾಣುತ
ಧನ್ಯತನದಿಂ ತುಷ್ಟನಾದೆನು
ನನ್ನ ಮನ ಭಯದಿಂದ ಕಂಪಿಸುತಿದೆ ಮಹಾದ್ಭುತಕೆ ।
ಎನ್ನೊಡನೆ ತಾನಾಡುತಿಹ ಸಂ
ಪನ್ನ ಮೂರ್ತಿಯ ತೋರಿಸೆನಗೆ ಪ್ರ
ಸನ್ನನಾಗೆಲೆದೇವ ದೇವೋತ್ತಮ ಜಗನ್ನಾಥ ॥ ೪೫

ವರಕಿರೀಟವ ಗದೆಯ ಚಕ್ರವ
ಧರಿಸಿಕೊಂಡಿಹ ನಿನ್ನ ಮುನ್ನಿನ
ಪರಮಮೂರ್ತಿಯ ಕಾಣಲಿಚ್ಛೈಸುವೆನು ನೀನೆನಗೆ ।
ಪಿರಿದು ಸಾವಿರಬಾಹುಗಳ ಮುರ
ಹರನೆ ನಾಲುಕುಭುಜದಲೊಪ್ಪುವ
ಗರುವ ಮೂರ್ತಿಯ ತೋರಿಸೆಂದನು ಪಾರ್ಥ ಕೈಮುಗಿದು ॥ ೪೬

ಹರಿ ನುಡಿದನರ್ಜುನಗೆ ಕೇಳೈ
ನಿರುತದಿಂ ನೀನಲ್ಲದನ್ಯರು
ಪಿರಿದು ಕಾಣರನಂತತೇಜೋಮಯಸನಾತನವ ।
ಪಿರಿಯ ವಿಶ್ವಾಕೃತಿಯ ರೂಪವ
ಪರಮಯೋಗದ ಬಲದಿ ತೋರಿದೆ
ಕರುಣದಿಂ ದೀಪರಿಯಲಲೆಕಲಿ ಪಾರ್ಥಕೇಳೆಂದ ॥ ೪೭

ಈ ಪರಿಯ ವಿಶ್ವಾಕೃತಿಯ ವರ
ರೂಪ ಧರಿಸಿದ ನಾನು ದಿಟದಿಂ
ಪಾಪಮಿಶ್ರಿತಮರ್ತ್ಯರೊಳು ನಿನ್ನಿಂದಬೇರಾದ ।
ಕಾಪುರುಷರಿಗೆ ವೇದಪಾಠಕ
ಲಾಪ ಯಜ್ಞಕ್ರಿಯೆ ತಪವ್ರ ಜಪ
ರೂಪದಾನಂಗಳಲಿ ಭಜಿಸಲು ಬಾರೆನಾನೆಂದ ॥ ೪೮

ಎಲೆಧನಂಜಯ ಈ ತೆರದಲಿಹ
ಖಳಭಯಂಕರರೂಪನೀಕ್ಷಿಸಿ
ಯಳುಕದಿರು ಮತಿಗುಂದದಿರು ನೀ ಮುನ್ನ ಕಂಡರಿದ ।
ಲಲಿತದೆನ್ನಯ ರೂಪ ನಂಬದೆ
ನಲಿದು ನೋಡೆಂದೆನುತ ಮುರರಿಪು
ಚಲುವ ಮುನ್ನಿನ ರೂಪ ಧರಿಸಿದನರಸ ಕೇಳೆಂದ ॥ ೪೯

ಕೇಳು ಧೃತರಾಷ್ಟ್ರಾವನಿಪ ಹರಿ
ಹೇಳಿದನು ಫಲುಗುಣನೊಡನೆ ಸಂ
ಮೇಳದಿಂದೀಪರಿ ನುಡಿದು ನೆರೆ ಚೆಲುವಿಕೆಯನಾಂತ ।
ಅಲಲಿತಮೂರ್ತಿಯನು ಧರಿಸಿದ ದ
ಯಾಳು ತನ್ನಯ ರೂಪ ತೋರಿಸಿ
ಬೋಳವಿಸಿದನು ಬೆದರುವರ್ಜುನನನು ಕರುಣದಿಂದ ॥ ೫೦

ಬಳಿಕ ನರನಿಂತೆಂದ ಲಕ್ಷ್ಮೀ
ನಿಳಯ ಕೇಳೈ ನಿನ್ನ ಮಾನುಷ
ಚೆಲುವ ರೂಪನು ಕಂಡು ಮಗುಳೆಚ್ಚರು ಜನಿಸಿತೆನಗೆ ।
ತಿಳಿದುದಂತಃಕರಣ ಚಿತ್ತವು
ನೆಲೆಗೆ ನಿಂದಿಹುದೆನ್ನ ಪ್ರಕೃತಿಯು
ಹೊಲಬನೈದಿದೆ ನಿಗಮನಿಲೆ ಕೃಷ್ಣಕೇಳೆಂದ । ೫೧

ಎಲೆಧನಂಜಯ ಉಳಿದ ನರರಿಗೆ
ನೆಲೆಗೆ ಕಾಣಲು ಶಕ್ಯವಲ್ಲದ
ಬಲಿದ ರೂಪನು ಧರಿಸಿಕೊಂಡಿರ್ದೆನ್ನ ಮೂರ್ತಿಯನು ।
ಒಲವಿನಿಂದೀಕ್ಷಿಸಿದೆ ಯಾವುದ
ಹಲವು ದೇವರು ನಿತ್ಯವಾಗಿದ
ನೊಲವಿನಿಂ ದೀಕ್ಷಿಸಲು ಬಯಸುವರೆಂದನಸುರಾರಿ ॥ ೫೨

ಶ್ರುತಿಗಳೆಂದ ತಪಂಗಳಿಂ ಕೇ
ಳತಿಶಯಿತದಾನಂಗಳಿಂದಂ
ಕ್ರತುಗಳಿಂ ಸಂಪನ್ನರೆನಿಸಿದ ಸಕಲಮಾನವರು ।
ಅತಿಭಯಂಕರ ವಿಶ್ವಮೂರ್ತಿಯ
ಗತಿಯನುಳ್ಳೆನ್ನುವನು ನೀ ಸ
ಮ್ಮತದಲೀಕ್ಷಿಸಿದಂತೆ ಕಾಣರು ಪಾರ್ಥ ಕೇಳೆಂದ ॥ ೫೩

ಎಲೆ ಧನಂಜಯ ವಿಶ್ವಮಯವಹ
ನೆಲೆಯ ರೂಪಿನ ನಾನು ಪರರಿಗೆ
ಚಲಿಸ ದೇಕಾಗ್ರತೆಯಲಿರುತಿಹ ನಿಜಭಕುತಿಯಿಂದ ।
ಹೊಲಬಿನಿಂ ದರಿಯಲುಬಹೆನು ನಿ
ರ್ಮಲತೆಯಿಂ ಕಾಣಲುಬಹೆನು ನಿಜ
ನೆಲೆಯ ಕೂಡಲುವಶವಹೆನು ಕೇಳೆಂದನಸುರಾರಿ ॥ ೫೪

ಸಂಗವನು ಬಿಟ್ಟಖಿಳಸತ್ಕ
ರ್ಮಂಗಳನು ನನಗರ್ಪಿಸುತ ಫಲ
ಸಂಗವರ್ಜಿತ ಭಕ್ತಿಯುಕ್ತನು ಮತ್ಪರಾಯಣನು ।
ಹಿಂಗದೆನ್ನೊಳ ಗಿರ್ಪಖಿಳಭೂ
ತಂಗಳಲಿ ನಿರ್ವೈರಿಯಾದವ
ನಂಗ ಕೇಳೈ ಯೆನ್ನ ನೈದುವ ನೆಂದನಸುರಾರಿ ॥ ೫೫

- ಇಂತು ವಿಶ್ವರೂಪಸಂದರ್ಶನವೆಂಬ ಹನ್ನೊಂದನೇ ಅಧ್ಯಾಯ ಸಂಪೂರ್ಣ -

---

# ಹನ್ನೆರಡನೇ ಅಧ್ಯಾಯ - ಭಕ್ತಿಯೋಗ

ಸೂಚನೆ ॥ ಜ್ಞಾನಸಾಧನ ಭಕ್ತಿಯೋಗವು
ತಾನಧಿಕ ಕೇಳೆಲೆಧನಂಜಯ
ಮಾನವರುಗಳಿಗೆಂದು ಲಕ್ಷ್ಮೀಕಾಂತ ಬೋಧಿಸಿದ ॥

ಆರು ಕೆಲರೀವಿಶ್ವರೂಪವ
ಸಾರದಿಂ ಭಜಿಸುವರು ಮತ್ತೆ
ನ್ನಾರು ಕೆಲರವ್ಯಕ್ತವೆನಿಸುವ ನಿನ್ನ ನಿಜಪದವ ।
ಸೇರಿ ಭಜಿಸುವ ರುಭಯರೊಳು ಸಂ
ಸಾರಶರಧಿಯ ಬೇಗ ದಾಂಟುವ
ಧೀರಯೋಗಿಗ ಳಾರೆನಗೆ ಹೇಳೆಂದನಾ ಪಾರ್ಥ ॥ ೧

ಹರಿ ನುಡಿದನೆನ್ನಲ್ಲಿ ಚಿತ್ತವ
ನಿರಿಸಿ ವಿಶ್ವಾಸವನು ತಳೆದಿಹ
ನರರೊಳುತ್ತಮ ರಾರುಕೆಲರು ವಿಚಾರಪರರಾಗಿ ।
ನಿರುತದಿಂ ದನವರತ ಭಜಿಪರು
ಪುರುಷರವ ರತ್ಯಧಿಕರೆಂದೇ
ಹರುಷದಿಂದರಿಯೆನ್ನಮತವಿದು ಪಾರ್ಥ ಕೇಳೆಂದ ॥ ೨

ಆರುಕೆಲಬ ರಚಿಂತ್ಯ ಸರ್ವಗ
ಸಾರತರಕೂಟಸ್ಥ ಚಲಿಸದ
ಪಾರಧ್ರುವ ವವ್ಯಕ್ತ ವಜ್ಞಾತೆದೂರವೆನಿಸಿರ್ಪ ।
ಚಾರುತರ ಪರಬೊಮ್ಮವನು ಮನ
ವಾರೆ ಭಜಿಸುವ ರವರು ನೆರೆ ಸಂ
ಸಾರವ ನನಾಯಾಸದಲಿ ದಾಂಟುವರು ಕೇಳೆಂದ ॥ ೩

ಇಂದ್ರಿಯಂಗಳ ನೆಲ್ಲವನುಮುದ
ದಿಂದ ನಿಯಮಿಸಿ ಸಕಲಭೂತದೊ
ಳೊಂದು ಬುದ್ಧಿಯನುಳ್ಳವರು ಸಚರಾಚರಂಗಳಲಿ ।
ಕುಂದದೆಂದುಂ ಹಿತವನೇ
ನಲವಿಂದ ಲಾಚರಿಸುವರು ತಾವಾ
ನಂದರೂಪಿನ ಲೆನ್ನ ನೈದುವವರೆಂದನಸುರಾರಿ ॥ ೪

ಕಾಣಬಾರದ ಬೊಮ್ಮವನು ನೆರೆ
ಕಾಣಬೇಕೆಂದೆಂಬ ಮನದಾ
ಪ್ರಾಣಿಗಳಿಗಾಯಾಸ ತಾನತ್ಯಧಿಕವಾಗಿಹುದು ।
ಮಾಣ ದೀದೇಹಾಭಿಮಾನದ
ಕಾಣಿಕೆಯನುಳ್ಳರ್ಗೆ ಬೊಮ್ಮದ
ಕಾಣಿಕೆಯು ದುರ್ಲಭ ಕಣಾ ಕಲಿಪಾರ್ಥ ಕೇಳೆಂದ ॥ ೫

ಸರ್ವಕರ್ಮಂಗಳ ಸಮರ್ಪಿಸಿ
ಸರ್ವಥಾ ಕೇಳಾರು ಕೆಲಬರು
ಸರ್ವಭಾವದೊ ಳೆನ್ನೊ ಳೈಕ್ಯಾಸಕ್ತರಾಗಿಹರು ।
ಉರ್ವಿಯೊಳ ಗೇಕಾಗ್ರಚಿತ್ತದಿ
ಸರ್ವಗತನಾ ದೆನ್ನ ನೆನೆಯುತ
ಸರ್ವದಾ ಭಜಿಸುವ ರವರ ರಕ್ಷಿಸುವೆನಾನೆಂದ ॥ ೬

ಎನ್ನೊ ಳಿರಿಸಿದ ಮನವನುಳ್ಳ ನಿ
ಜೋನ್ನತರ ಭಕ್ತರನು ಮೃತ್ಯು ಭ
ಯೋನ್ನುತದ ಸಂಸಾರಘನಸಾಗರದ ದೆಸೆಯಿಂದ ।
ಸನ್ನಿಹಿತವಾಗಿರ್ಪಸುಖದಿಂ
ದನ್ಯಭಾವವ ಬಿಡಿಸಿ ಕೃಪೆಯಿಂ
ಮನ್ನಿಸುತ ಲತಿವೇಗದಿಂದಾಂಟಿಸುವೆ ಕೇಳೆಂದ ॥ ೭

ನಿನ್ನ ಚಿತ್ತವ ನನ್ನೊಳಿರಿಸು
ನಿನ್ನ ಬುದ್ಧಿಯೊಳೆನ್ನನೇ ನೆರೆ
ಸನ್ನಿಹಿತವಾಗಿರಿಸುತೀಪರಿ ಮಾಡುತಿರೆ ಬಳಿಕ ।
ಅನ್ಯಭಾವವನುಳಿದು ನೀ
ನೆನ್ನೊಳೈಕ್ಯವ ಪಡೆದು ಪರಸ
ಚ್ಚಿನ್ಮಯಾತ್ಮನ ಪದವನೈದುವೆ ಪಾರ್ಥ ಕೇಳೆಂದ ॥ ೮

ಈ ಪರಿಯಲೆನ್ನಲ್ಲಿ ಮನವ ನಿ
ರೂಪದಿಂ ಸ್ಥಿರವಾಗಿ ನಿಲಿಸ
ಲ್ಕಾಪನೀನಾಗದೊಡದರಿ ನಿಮ್ಮೇಲೆ ಸಾಧನೆಯ ।
ದೀಪಿಸುವ ಅಭ್ಯಾಸಯೋಗದಿ
ನಾಪರಮನೆನಿಪೆನ್ನ ನಿಜಚಿ
ದ್ರೂಪವನು ಪಡೆಯಲ್ಕೆ ಬಯಕೆಯ ಮಾಡುನೀನೆಂದ ॥ ೯

ಪರಮವೆನಿಪಭ್ಯಾಸಯೋಗದಿ
ಚರಿಸಲಾರದೊ ಡೆನ್ನಭಾವದ
ಪರಿಚರಿಯಸತ್ಕರ್ಮದೊಳ ಗಾಸಕ್ತಿಯುತನಾಗು ।
ಧರದಲೀಕರ್ಮಂಗಳನು ಮ
ತ್ಪರವೆನಿಸಿ ಮಾಡುತ್ತಿರಲು ನೀಂ
ಪರಮಸಿದ್ಧಿಯ ಪಡೆವೆಯೈ ಕಲಿಪಾರ್ಥ ಕೇಳೆಂದ ॥ ೧೦

ಎನ್ನಯೋಗವನಾಶ್ರಯಿಸಿ ನೀ
ಮನ್ನಿಸದ ಸತ್ಕರ್ಮವನು ಸಂ
ಪನ್ನನಾಗಿಯೆ ಮಾಡುವಲ್ಲಿ ಸಮರ್ಥನೆನಿಸಿದೊಡೆ ।
ನಿನ್ನ ಚಿತ್ತವ ನೀ ನಿಯಾಮಿಸಿ
ಯಿನ್ನಖಿಳಕರ್ಮದ ಫಲಂಗಳ
ನೆನ್ನೊಳರ್ಪಿಸು ಪರಮಪದವಿಯ ಪಡೆವೆ ಕೇಳೆಂದ ॥ ೧೧

ಲೇಸಲಾಲೋಕದೊಳು ಕರ್ಮಾ
ಭ್ಯಾಸದಿಂ ಸುಜ್ಞಾನವದರಿಂ
ಲೇಸೆನಿಸುವುದು ಧ್ಯಾನ ಕೇಳಾಧ್ಯಾನದಿಂ ಬಳಿಕ ।
ಆಸಕಲ ಕರ್ಮದ ಫಲಂಗಳ
ನಾಸೆಯಿಲ್ಲದೆ ಬಿಡುವು ದಣಿಯರ
ಲೇಸು ಮತ್ತದರಿಂದ ಲುತ್ತಮಶಾಂತಿ ಕೇಳೆಂದ ॥ ೧೨

ಈ ಸಕಲಭೂತಂಗಳನು ಬಯ
ಲಾಸೆಯಿಂ ದ್ವೇಷಿಸದೆ ಪ್ರಾಣಿಗ
ಳೈಸರಲಿ ಮಿತ್ರತ್ವ ಕರುಣಾ ಕ್ಷಮೆಗಳುಳ್ಳವರು ।
ಆಸುಖಂಗಳೊ ಳಖಿಲ ದುಃಖದ
ಘಾಸಿಯೊಳು ಸಮವಾಗಹಂಕೃತಿ
ವಾಸನೆಗ ಳಳಿದುಳಿದವನೆ ವರಯೋಗಿ ಕೇಳೆಂದ ॥ ೧೩

ಹುಟ್ಟಿದನಿತೇ ಲಾಭದಲಿ ಸಂ
ತುಷ್ಟನನುದಿನ ಯೋಗದಲಿ ವರ
ನಿಷ್ಠೆಯುಳ್ಳವ ನಿಯತಚಿತ್ತನು ನಿಶ್ಚಯಾತ್ಮಕನು ।
ಇಷ್ಟದಿಂ ಮನಬುದ್ಧಿಗಳ ತಾ
ನೆಟ್ಟನೆನ್ನೊಳೆ ನಿಲಿಸಿದವನೇ
ಸೃಷ್ಟಿಯೊಳು ಮದ್ಭಕ್ತನೆನಗತಿ ಪ್ರಿಯನು ಕೇಳೆಂದ ॥ ೧೪

ಆವನಿಂದೀಜಗ ಬೆದರದಿಹು
ದಾವ ನಾಈಜಗದ ದೆಸೆಯಿಂ
ಭಾವಿಸಲು ತಾಬೆದರ ಹರ್ಷಾಮರ್ಷಭೀತಿಗಳಿಂ ॥
ಆವನೊಬ್ಬನು ಮುಕ್ತನಾಗಿಹ
ಪಾವನನು ಕೇಳಾತನೇ ನಿಜ
ಭಾವದಿಂದವ ನೆನಗತಿಪ್ರಿಯ ನೆಂದನಸುರಾರಿ ॥ ೧೫

ವಿಷಯದಭಿಲಾಷೆಯನು ಬಿಟ್ಟವ
ನೆಸೆವ ಶುಚಿಯೋಗದಲಿ ದಕ್ಷನು
ಮಿಸುಪ ಭೋಗಂಗಳಲುದಾಸೀನನು ಗತವ್ಯಥನು ।
ವಸುಧೆಯೊಳ ಗಿಹಪರದ ಭೋಗವ
ನೆಸಗುವಖಿಳಾರಂಭಹೀನನು
ಕುಶಲನಾವನ ನವನತಿ ಪ್ರಿಯಭಕ್ತನೆನಗೆಂದ ॥ ೧೬

ಆವನೊಬ್ಬನು ಲೇಸುಹೊಲ್ಲೆಹ
ತಾವಿನಲಿ ಹರುಷಿಸನು ದ್ವೇಷಿಸ
ನಾವಿನುತಭೋಗವ ಬಯಸ ದುಃಖಿಸನು ಕೇಡಿನಲಿ ।
ಭಾವಿಸಲ್ಕೆ ಶುಭಾಶುಭಂಗಳ
ತಾ ವಿವೇಕದಿ ಬಿಟ್ಟು ಭಕ್ತಿಯ
ಭಾವದಿಂ ಭಜಿಸುವನು ಕೇಳವ ನೆನಗತಿಪ್ರಿಯನು ॥ ೧೭

ಹಗೆಕೆಳೆಯರಲಿ ಮನ್ನಣೆಗಳಲಿ
ಮಿಗಿಲೆನಿಸು ನವಮಾನದಲಿ ತಾ
ಸೊಗವ ಶೀತೋಷ್ಣಂಗಳಲಿ ಸುಖದುಃಖದೆಡೆಗಳಲಿ ।
ನಗುನಗುತ ಸಮನಾಗಿ ಸಂಗವ
ಬಗೆಗೆ ಬಿಟ್ಟಿಹ ನಾವನವನೀ
ಜಗದೊಳುತ್ತಮಭಕ್ತನೆನಗೆಲೆ ಪಾರ್ಥ ಕೇಳೆಂದ ॥ ೧೮

ಸ್ತುತಿಯುಳಿತನಿಂದೆಯಲಿ ಸಮ ಸು
ವ್ರತದ ಮೌನವನುಳ್ಳ ದೊರಕಿದ
ನಿತನು ಕೈಕೊಂಡೈಸರಲಿ ಸಂತುಷ್ಟನಾಗಿಹನು ।
ಸತತ ಗೃಹವನು ಬಿಟ್ಟು ಸುಸ್ಥಿರ
ಮತಿಯನುಳ್ಳ ಭಕ್ತಿಯುತನವ
ನತಿಮಹಾಪ್ರಿಯನೆನಗೆ ಕುಂತೀಸುತನೆ ಕೇಳೆಂದ ॥ ೧೯

ಆರು ಕೆಲ ರೀಧರ್ಮಮೋಕ್ಷದ
ಸಾರವನು ನಾಹೇಳಿದುದ ವಿ
ಸ್ತಾರದಿಂ ಭಜಿಸುತ್ತಿಹರು ವರಶಾಸ್ತ್ರಮಾರ್ಗದಲಿ ।
ವೀರ ಕೇಳ್ವಿಶ್ವಾಸಯುಕ್ತರು
ದಾರರೆನಿಸುವ ಮತ್ಪರಾಯಣ
ಧೀರಭಕ್ತರು ನನಗತಿಪ್ರಿಯರೆಂದನಸುರಾರಿ ॥ ೨೦

- ಇಂತು ಭಕ್ತಿಯೋಗವೆಂಬ ಹನ್ನೆರಡನೇ ಅಧ್ಯಾಯ ಸಂಪೂರ್ಣ -

## ಹದಿಮೂರನೇ ಅಧ್ಯಾಯ - ಕ್ಷೇತ್ರಕ್ಷೇತ್ರಜ್ಞ ವಿಭಾಗ ಯೋಗ

ಸೂಚನೆ ॥ ತನುವೆನಿಪ ಕ್ಷೇತ್ರವನು ಕ್ಷೇತ್ರ
ಜ್ಞನನು ಜ್ಞೇಯಪ್ರಕೃತಿ ಪುರುಷರ
ನನಿತುವನು ಸಂಕ್ಷೇಪದಿಂ ದರ್ಜುನಗೆ ಹರಿ ನುಡಿದ ॥

ತನುವಿದೇ ತಾಂ ಕ್ಷೇತ್ರವೆನಿಸುವು
ದನುನಯದಿ ಕೌಂತೇಯ ಕೇಳೀ
ತನುವನಾವವ ಬಲ್ಲ ನವ ಕ್ಷೇತ್ರಜ್ಞನೆನಿಸುವನು ।
ತನುವಿನಭಿಮಾನಿಯನು ತನುವನು
ಘನತರಪ್ರತಿಯಿಂದರಿದ ವರ
ಮುನಿಗಳೀ ಪೇಳುವರು ತಿಳಿ ನೀ ನೆಂದನಸುರಾರಿ ॥ ೧

ಸಕಲಕ್ಷೇತ್ರಂಗಳಲ್ಲಿ ನೆರೆ ಸು
ವ್ಯಕುತನಹ ಕ್ಷೇತ್ರಜ್ಞನನು ಸದು
ಯುಕುತಿಯಿಂ ನಾನೆಂದು ತಿಳಿ ಯೀದೇಹದೇಹಿಗಳ ।
ಪ್ರಕಟವಾಗರಿದಿರ್ಪರವೆ ತಾ
ಮುಕುತಿಕರ ಸುಜ್ಞಾನವೆಂದೇ
ನಿಖಿಳ ಶಾಸ್ತ್ರದೊಳೆನ್ನ ಮತವೆಲೆಪಾರ್ಥ ಕೇಳೆಂದ ॥ ೨

ಈಶರೀರ ವಿದಾವುದೆಂತಹು
ದೇಸು ತತ್ವವಿಕಾರವುಳ್ಳುದು
ನಾಶವೈದುವು ದಾವಕಾರಣದಿಂದ ಲುದಯಿಸಿತು ।
ಆಶರೀರಿ ಯದೇಸುಶಕ್ತಿ ವಿ
ಲಾಸನೆನಿಸುವ ನೆಂಬನಿತ ಸುಪ
ಮಾಸದಿಂದೆನ್ನಿಂದ ತಿಳಿ ನೀನೆಂದನಸುರಾರಿ ॥ ೩

ಋಷಿಗಳಿಂದವೆ ಹಲವುಪರಿಯಲಿ
ವಸುಧೆಯೊಳು ನಾನಾತೆರದಿ ಬಂ
ದೆಸೆವ ವರವೇದಂಗಳಿಂ ನೆರೆ ಬೇರೆಬೇರಾಗಿ ।
ಸಸಿನೆ ನಿಶ್ಚಿತವೆನಿಸುತಿಹ ನಿಜ
ನಿಶಿತಯುಕ್ತಿಯನುಳ್ಳ ಸೂತ್ರ
ಪ್ರಸರದಿಂ ದಾಬೊಮ್ಮ ಹೇಳಿಸಿ ಕೊಳುತಲಿಹುದೆಂದ ॥ ೪

ಈಮಹಾಭೂತಂಗ ಳೀನಿ
ಸ್ಸೀಮವೆನಿಸಿದ ಹಮ್ಮು ಬುದ್ಧಿಯು
ತಾಮಸದ ಅವ್ಯಕ್ತನೆರೆದೇಕಾದಶೇಂದ್ರಿಯವು ।
ಕಾಮರಾಗಾದಿಗಳಿಗತಿಸು
ಪ್ರೇಮದಿಂ ಕಾರಣವೆನಿಪ ಗುಣ
ನಾಮಶಬ್ದಾದಿಗಳ ಪಂಚಕ ವಿನಿತುತೋರುವುವು ॥ ೫

ವಿದಿತಕಾಮ ಕ್ರೋಧ ಸುಖಮಂ
ತದರನಂತರ ದುಃಖ ಚಿತ್ತದ
ಪದದರಿವು ಧೃತಿ ಯಿನಿತು ವಾ ಭೂತಾದಿಸಮುದಾಯ ।
ಮುದದಿ ತಮ್ಮಧಿಕಾರಸಹಿತಿರ
ಲದು ಸಮಾಸದಿ ಕ್ಷೇತ್ರವೆಂದೇ
ವಿದುಗಳಿಂ ಹೇಳಿಸಿಕೊಳುತಲಿಹು ದೆಂದನಸುರಾರಿ ॥ ೬

ಮಾನವಿಲ್ಲದೆ ಡಂಭವಿಲ್ಲದೆ
ತಾನಿರುವ ಪ್ರಾಣಿಗಳ ಹಿಂಸೆ ನಿ
ಧಾನಿಸಲ್ಕಿಲ್ಲದೆಯಿರುವ ಸೈರಣೆಯು ರುಜುತನವು ।
ಜ್ಞಾನದಿಂ ಗುರುಸೇವೆ ಶುಚಿತನ
ಧ್ಯಾನದಲಿ ಸುಸ್ಥಿರತೆ ಚಿತ್ತ
ಸ್ಥಾನನಿಗ್ರಹ ವಿನಿತು ತತ್ವಜ್ಞಾನಸಾಧನವು ॥ ೭

ಉರವಣಿಪ ಶಬ್ದಾದಿವಿಷಯದ
ನೆರವಿಯಲಿ ವೈರಾಗ್ಯ ತೋರುವ
ಶರಿರದಲಿ ನಿರಹಂತೆ ಜನನವು ಮರಣ ವಾರ್ಧಕವು ।
ಹುರುಳುಗೆಡಿಸುವ ವ್ಯಾಧಿ ದುಃಖದ
ನೆರವಿ ಮೊದಲಹ ದೋಷದರ್ಶನ
ವಿರತಿ ತತ್ವ ಜ್ಞಾನ ಸಾಧನ ವೆಂದನಸುರಾರಿ ॥ ೮

ಪುತ್ರದಾರ ಗೃಹಾದಿವಿವಿಧವಿ
ಚಿತ್ರವಿಷಯಂಗಳಲಿ ತೋರ್ಪಗು
ಣತ್ರಯದಲುದಯಿಸುವ ಸ್ಪೃಹೆಯಾಸಕ್ತಿ ಯಳಿದಿರಲು ।
ನಿತ್ಯಮಿಷ್ಟಾನಿಷ್ಟ ದುಭಯೋ
ತ್ಪತ್ತಿಯಲಿ ಸಮಚಿತ್ತನಾಗಿಹು
ದುತ್ತಮೋತ್ತಮಜ್ಞಾನ ಸಾಧನ ವೆಂದನಸುರಾರಿ ॥ ೯

ಎನ್ನಲೇಕಾತ್ಮಕವೆನಿಪ ಸಂ
ಪನ್ನಯೋಗದಿ ಕವಲುವೋಗದೆ
ಯುನ್ನ ತೋನ್ನ ತಭಕ್ತಿಯೇಕಾಂತವನು ಸೇವಿಸುತ ।
ಮನ್ನಿಸುವ ಸಭೆಗಳನು ತ್ಯಜಿಸುತ
ಸನ್ನಿಹಿತಸರ್ವಾತ್ಮಭಾವವು
ಮುನ್ನ ಹೇಳಿದ ವಿನಿತು ಜ್ಞಾನೋಪಾಯ ಕೇಳೆಂದ ॥ ೧೦

ನಿರುತದಿಂ ದಧ್ಯಾತ್ಮವಿದ್ಯಾ
ಭರವು ವರತತ್ವಾರ್ಥದರ್ಶನ
ಪರಿಕಿಸಲು ತಾನಿನಿತು ಸಮ್ಯಗ್ಜ್ಞಾನಸಾಧನವು ।
ಭರದಿ ಕೇಳಿದರಿಂದಲನ್ಯವು
ಪಿರಿಯರಿಂ ದಜ್ಞಾನವೆನಿಸುಗು
ನರನೆ ತಿಳಿ ನೀನೆಂದನಾಮುರವೈರಿ ಕರುಣದಲಿ ॥ ೧೧

ಆವುದೊಂದನು ತಿಳಿಯಲದರಿಂ
ಪಾವನನು ಮೋಕ್ಷವನು ಪೊರ್ದುವ
ನಾವಿಶೇಷಜ್ಞಾನವನು ನಿನಗೊರೆವೆನೊಲವಿನಲಿ ।
ವ್ಯಾವಹಾರಿಕಸತ್ತ ಸತ್ತೆಂ
ದಾವಪರಿಯಿಂ ದೆನಿಸಿಕೊಳ್ಳದೆ
ಭಾವಿಸಲ್ಕೆ ಯನಾದಿಯೈ ಪರಬೊಮ್ಮ ಕೇಳೆಂದ ॥ ೧೨

ವಿಶ್ವತಶ್ಶಿರ ವಿಶ್ವತೋಮುಖ
ವಿಶ್ವತೋವರನಯನ ಶ್ರುತಿಯುತ
ವಿಶ್ವತಃಕರ ವಿಶ್ವತೋಬಹುಪಾದವೆನಿಸಿರ್ಪ ।
ವಿಶ್ವಶಕ್ತಿಯ ರೂಪೆನಿಸುತಿಹ
ವಿಶ್ವಮಯ ಪರಬೊಮ್ಮೆ ಜಗದೊಳು
ವಿಶ್ವವನೆ ಆವರಿಸಿಹುದು ಕಲಿಪಾರ್ಥ ಕೇಳೆಂದ ॥ ೧೩

ಹೊರಗೊಳಗಣೆಂದ್ರಿಯಗುಣಂಗಳ
ಪಿರಿದು ಬೆಳಗುತ್ತಿಹುದು ಬಳಿಕಲಿ
ಬೆರಗಿನಿಂ ಸಕಲೇಂದ್ರಿಯಂಗಳ ಬಿಟ್ಟು ತಾನಿಹುದು ।
ವಿರಕವಿಲ್ಲದೆ ಸಕಲಜಗವನು
ನಿರುಗೆಯಿಂ ಧರಿಸಿಹುದು ನಿರ್ಗುಣ
ಮೆರೆವ ಗುಣನಿಕರವನು ಭೋಗಿಸುತಿಹುದು ಕೇಳೆಂದ ॥ ೧೪

ಮೆರೆವುದೊಳಹೊರೆಗೆನಿಸಿ ಜಗದೊಳ
ಗುರುವ ಭೂತಂಗಳಲಿ ಬೊಮ್ಮವು
ಬೆರೆಸಿನಿಂದ ಚರಾಚರವು ತಾನಾಗಿ ತೋರುವುದು ।
ಮೆರೆದು ದೂರದಲಿಹುದು ಮತಿಯಿಂ
ದರಸಲಿಕೆ ಹತ್ತಿರೆಯಿಹುದು ನಿಜ
ನಿರುಗೆಯಿಂ ದತಿಸೂಕ್ಷ್ಮವಾಗಿಯೆ ತೋರುತಿಹುದೆಂದ ॥ ೧೫

ಈ ಮಹಾಭೂತಂಗಳಲಿ ನಿ
ಸ್ಸೀಮ ಬೊಮ್ಮನು ಬೇರೆನಿಸಿ ತಾ
ನೇಮದಿಂದಿರುತಿರ್ದೊಡೆಯು ಬೆರಸಿರ್ಪ್ಪಚಂದದಲಿ ।
ಪ್ರೇಮದಿಂ ತೋರುವುದು ಭೂತ
ಗ್ರಾಮ ಸೃಷ್ಟಿಸ್ಥಿತಿ ಲಯಂಗಳ
ಕಾಮಿಸದೆ ಮಾಡುತ್ತಲಿಹುದೆಲೆ ಪಾರ್ಥ ಕೇಳೆಂದ ॥ ೧೬

ಜ್ಯೋತಿರೂಪುಗಳಿಂಗೆ ತಾನೇ
ಜ್ಯೋತಿಯೆನಿಸುತ್ತಿಹುದವಿದ್ಯಾ
ವ್ರಾತವೆನಿಪ ತಪಸ್ಸಿನಿಂ ದತಿದೂರವೆನಿಸುವುದು ।
ಖ್ಯಾತವದು ಸುಜ್ಞಾನ ಜ್ಞೇಯವು
ನೀತಿಯಿಂ ಕೇಳ್ ಜ್ಞಾನಗಮ್ಯವು
ಭೂತನಿಚಯದ ಹೃದಯದಲಿ ನೆಲಸಿಹುದು ನಿಜವೆಂದ ॥ ೧೭

ಇಂತು ತನುವೆನಿಸಿರ್ಪ್ಪ ಕ್ಷೇತ್ರವ
ಸಂತತದ ಸುಜ್ಞಾನವನು ನಿಜ
ದಿಂ ತಿಳಿವ ಜ್ಞೇಯವನು ಸಂಕ್ಷೇಪದಲಿ ಪೇಳಿದೆನು ।
ಚಿಂತಿಸುತಲಿರ್ಪನ್ನ ಭಕ್ತನು
ಭ್ರಾಂತಿಯಳಿದದ ನರಿಯಲೆನ್ನನ
ಚಿಂತ್ಯರೂಪನನೈದುವನು ಕಲಿ ಪಾರ್ಥ ಕೇಳೆಂದ ॥ ೧೮

ಪ್ರಕೃತಿಪುರುಷ ರೆನಿಪ್ಪುಭಯವಂ
ಪ್ರಕಟವಾಗಿ ಯನಾದಿಯೆಂದರಿ
ವಿಕರಿಸುವ ಮಹಾದಿತತ್ವಂಗಳ ವಿಕಾರವನು ।
ವ್ಯಕುತವಹ ಸತ್ವಾದಿಗುಣವನು
ಪ್ರಕೃತಿಯಿಂ ಮುದಯಿಸುವುವೆಂದೇ
ಯುಕುತಿಯಿಂದರಿ ಯೆಲೆ ಧನಂಜಯ ಎಂದನಸುರಾರಿ ॥ ೧೯

ಕಾರಿಯಂಗಳಿ ಗಖಿಲಕರಣಕೆ
ಸಾರಕರ್ತೃತ್ವದಲಿ ನೆಟ್ಟನೆ
ಕಾರಣವು ಮೂಲಪ್ರಕೃತಿಯೆನಿಸುವುದು ಪರಿಕಿಸಲು ।
ಸೇರುತಿಹ ಸುಖದುಃಖಗಳ ವಿ
ಸ್ತಾರಭೋಕ್ತೃತ್ವದಲಿ ನೆಟ್ಟನೆ
ಕಾರಣವು ತಾ ಪುರುಷನೆನಿಸುಗು ಪಾರ್ಥ ಕೇಳೆಂದ ॥ ೨೦

ಆಪುರುಷ ಪ್ರಕೃತಿಯಲಿ ನಿಂದೇ
ವ್ಯಾಪಾರಿಸಿ ಪ್ರಕೃತಿಯಲೊಗೆದ ಬಹು
ರೂಪವಹ ಸತ್ವಾದಿಗುಣವಿಷಯವನು ಭೋಗಿಸುವ ।
ಈ ಪುರುಷನಿಗೆ ಸುರನರಾದಿಮ
ರೂಪವಹ ಜನ್ಮಂಗಳಲ್ಲಿ ಬಹು
ರೂಪವಹ ಗುಣಸಂಗವೇ ಕಾರಣವು ಕೇಳೆಂದ ॥ ೨೧

ಈತನುವಿನಭಿಮಾನಿ ಪುರುಷನು
ತಾ ತಳುವದೆ ಯುಪಾಧಿಭೇದದಿ
ನೀತಿಯಿ ನುಪದ್ರಷ್ಟೃವಂ ತನುಮಂತೃವೆನಿಸುವನು ।
ಆತನೇ ತಾಂ ಭರ್ತೃ ಭೋಕ್ತೃಗು
ಣಾತಿಶಯದ ಮಹೇಶ ಮಾಯಾ
ಜಾತವಳಿಯಲು ತಾನೆ ಪರಮಾತುಮನು ಕೇಳೆಂದ ॥ ೨೨

ಆವನೀಪುರುಷನನು ಗುಣದಿಂ
ಭಾವಸಹಿತೀಪ್ರಕೃತಿರೂಪನು
ತಾವಿವೇಚಿಸಿ ತಿಳಿವ ನಾಸತ್ಪುರುಷನಾದವನು ।
ಭೂವಲಯದೊಳು ಸಕಲಧರ್ಮ
ದೊಳಾವಚಂದದೊ ಳಿರ್ದೊಡೆಯು ಮಗು
ಳಾವಿಚಕ್ಷಣ ಜನಿಸನೈ ಕಲಿ ಪಾರ್ಥ ಕೇಳೆಂದ ೨೩

ಕೆಲ ರಾತ್ಮಧ್ಯಾನದಿಂದವೆ
ಚಲಿಸದಿರುತಿರ್ದಾತ್ಮನಲಿ ನಿ
ಶ್ಚಲರು ತಮ್ಮಿಂದಾತ್ಮನನು ಕಾಣುತ್ತಿಹರು ಸುಬುದಿ ।
ಕೆಲರು ಕೇಳೇಜ್ಞಾನಯೋಗದಿ
ಕೆಲರು ಕಾಂಬರು ಕರ್ಮಯೋಗದಿ
ಹಲವುಪರಿಯಿಂ ಧೈದುವರು ಪರಮಾತ್ಮ ವಸ್ತುವನು ॥ ೨೪

ಈಪರಿಯಲರಿಯದೆ ಕೆಲರು ಶ್ರುತಿ
ರೂಪತತ್ಪರರಾಗಿ ಯಾಚಾ
ರ್ಯೋಪದೇಶವ ಕೇಳಿ ತಚ್ಚರಣವನು ಸೇವಿಸುತ ।
ಆಪರವ ಭಜಿಸುತ್ತಿಹರು ಕೇ
ಳಾಪುರುಷರುಗಳೆಲ್ಲರುಂ ಭವ
ರೂಪಮೃತ್ಯುವ ದಾಂಟುವರು ಕಲಿ ಪಾರ್ಥ ಕೇಳೆಂದ ॥ ೨೫

ಎಲೆಭರತಕುಲ ತಿಲಕ ಕೇಳೈ
ನೆಲೆಗೆ ಸ್ಥಾವರಜಂಗಮಾತ್ಮಕ
ಹಲವುತೆರನಹ ಚೇತನಗ ಳೆನಿತೆನಿತುಭಾವದಲಿ ।
ಒಲವಿನಿಂ ದೀದೇಹದೇಹಿಗ
ಳೊಳು ಬಲಿದ ಸಂಯೋಗದಿಂದವೆ
ಹೊಲಬನರಿಯದೆ ಜನಿಸುತಿಹು ವರಿಯೆಂದನಸುರಾರಿ ॥ ೨೬

ಕೆಡುವಖಿಲಭೂತಂಗಳೊಳು ತಾ
ಕೆಡದೆ ಪರಮೇಶ್ವರನು ಸಮವಾ
ಗೆಡೆವರಿಯುದಿಹ ನೆಂದುಕಾಂಬನು ಮನುಜನಾವವನು ।
ಪೊಡವಿಯೊಳು ಕೇಳುವನು ತತ್ವವ
ಬಿಡದೆ ಕಂಡವ ನೆನಿಸುತಿಹನಿದು
ಜಡಮತಿಗಳಿಗೆ ದೊರಕದೆಂದಸುರಾರಿ ನೇಮಿಸಿದ ॥ ೨೭

ಎಲ್ಲೆಡೆಗಳಲಿ ಸಮವೆನಿಸಿ ಸಂ
ದಿಲ್ಲದಿಹ ಪರಮೇಶ್ವರನ ತಾಂ
ನಿಲ್ಲದಾವವ ನರಿಯುತಿಹ ನವ ತನ್ನ ತನ್ನಿಂದ ।
ಎಲ್ಲಿಯುಂ ಕೆಡಿಸದೆ ಪರಾತ್ಮನ
ಬಲ್ಲಕಾರಣದಿಂದ ಮೋಕ್ಷವ
ನಲ್ಲಿಯೇ ಪಡೆವನು ಕಣಾ ಕಲಿ ಪಾರ್ಥ ಕೇಳೆಂದ ॥ ೨೮

ಆವನೊಬ್ಬನು ಸಕಲಕರ್ಮವು
ಮೀವಿಕರಿಸುವ ಪ್ರಕೃತಿಯಿಂದಮೆ
ತಾವುಮಾಡಿಸಿಕೊಳುತಿಹುವು ಪರಮಾತ್ಮ ನಿಜದಿಂದ ।
ಆವುದಕೆ ತಾ ಕರ್ತನಲ್ಲೆಂ
ದೀವಿಭೇದವ ಕಂಡೊಡವನೇ
ಭಾವಿಸಲು ತತ್ವವನು ಕಂಡವ ನೆಂದನಸುರಾರಿ ॥ ೨೯

ಬೇರೆಬೇರಿಹ ಭೂತನಿಚಯವು
ಬೇರೆನಿಸದಿಹ ಬೊಮ್ಮನಲ್ಲಿಯೆ
ತೋರುತಿಹು ವೊಂದೆಡೆಯೊಳೆಂದಾವಾಗಲರಿಯುತಿಹ ।
ಬೇರೆನಿಸ ದದರಿಂದ ಲಖಿಳವ
ಮೀರಿ ತೋರುವ ಬೊಮ್ಮ ತಾನಹ
ಸಾರುತಿಹುವೀಯರ್ಥವನು ಶ್ರುತಿನಿಕರ ಕೇಳೆಂದ ॥ ೩೦

ಆದಿಯಿಲ್ಲದನಾದಿನಿರ್ಗುಣ
ನಾದ ಕತದಿಂದವೆ ಪರಾತ್ಮನು
ವಾದಹೊದ್ದದೆ ನಿತ್ಯನೆನಿಸುವ ನೀಶರೀರದಲಿ ।
ಆದರದಲಿರುತಿರ್ದೊಡೆಯು ಕಾ
ಮಾದಿಗಳ ನೆರೆ ಮಾಡ ಕರ್ಮದ
ಲಾದಫಲದಿಂ ಲೇಪವಡೆಯನು ಪಾರ್ಥ ಕೇಳೆಂದ ॥ ೩೧

ಆವ ಪರಿಯಿಂ ಗಗನವಗಲಕೆ
ತೀವಿಕೊಂಡಿರುತಿರ್ದೊಡೆಯು ನಿಜ
ಭಾವದಿಂದಲಿ ಸೂಕ್ಷ್ಮವಾಗಿಯೆ ಸರ್ವಲೇಪವನು ।
ಆವ ಪರಿಯಿಂ ಪಡೆಯದಿಹವೊಲು
ಭಾವಿಸಲಿಕಾಯಾತ್ಮ ನಖಿಳಸ
ಜೀವತನುಗಳೊಳಿರ್ದೊಡೆಯು ನಿರ್ಲೇಪ ಕೇಳೆಂದ ॥ ೩೨

ಎಂತು ಸೂರ್ಯನದೊಬ್ಬನೇ ನಿ
ಶ್ಚಿಂತೆಯಿಂದೀಸಕಲಲೋಕವ
ಸಂತತಂ ಬೆಳಗುತ್ತಿಹನೋ ಕ್ಷೇತ್ರವೆಲ್ಲವನು ।
ಅಂತು ಬೆಳಗುತ್ತಿಹನು ಜಗದೊಳು
ಸಂತ ನಾಕ್ಷೇತ್ರಜ್ಞ ನಿದುವೇ
ದಾಂತಸಿದ್ಧವು ನಂಬು ನೀನಿದನೆಂದನಸುರಾರಿ ॥ ೩೩

ಅದು ಕೆಲಬರು ಜ್ಞಾನದೃಷ್ಟಿಯ
ಸಾರದಿಂ ತಿಳಿದರಿದ ಕ್ಷೇತ್ರವಿ
ಕಾರವಂ ಕ್ಷೇತ್ರಜ್ಞರುಗಳ ವಿಭೇದನಿರ್ಣಯವ ।
ಕಾರಿಯದ ಭೂತಂಗಳನು ತ
ತ್ಕಾರಣದ ಪ್ರಕೃತಿಯ ವಿನಾಶವ
ನಾರಿವರವರೈದುವರು ಪರಮೋಕ್ಷ ಸಿದ್ಧಿಯನು ॥ ೩೪

– ಇಂತು ಕ್ಷೇತ್ರಕ್ಷೇತ್ರಜ್ಞ ವಿಭಾಗವೆಂಬ ಹದಿಮೂರನೇ ಅಧ್ಯಾಯ ಸಂಪೂರ್ಣ –

---

## ಪದಿನಾಲ್ಕನೇ ಅಧ್ಯಾಯ - ಗುಣತ್ರಯ ವಿಭಾಗಯೋಗ

ಸೂಚನೆ ॥ ಎನ್ನ ಮೂಲಪ್ರಕೃತಿಯಿಂದು
ತ್ಪನ್ನವಾದ ಗುಣತ್ರಯಂಗಳ
ಮನ್ನಿಸದೆ ಮೀರಿದ ಮಹಾತ್ಮನ ಪಾರ್ಥ ಕೇಳೆಂದ ॥

ಮತ್ತೆ ಕೇಳೈ ಹಿಂದೆ ನಾ ಪೇ
ಳ್ದುತ್ತಮಜ್ಞಾನಂಗಳೊಳಗ
ತ್ಯುತ್ತಮದ ಮತ್ತೊಂದು ಜ್ಞಾನವ ಪೇಳುವೆನು ನಿನಗೆ ।
ಸತ್ಯದಿಂ ಮುನಿಮುಖ್ಯರಾವುದ
ಚಿತ್ತದಿಂ ನೆರೆ ಗಳಿಸಿದುದರಿಂ
ನಿತ್ಯವಹ ಸಿದ್ಧಿಯನು ಪಡೆವರು ಪಾರ್ಥ ಕೇಳೆಂದ ॥ ೧

ಪರಮತತ್ವಜ್ಞಾನ ವಿದರಾ
ದರಭರದಿ ಸಾರ್ದೆನ್ನ ಸರಿಯಹ
ಪರಮ ಪದವಿಯ ಪಡೆವರೈ ಈ ಸೃಷ್ಟಿಕಾಲದಲಿ ।
ಮರಳಿ ಜನಿಸರು ವಿಲಯದಲಿ ನೆರೆ
ಮರಣಧರ್ಮವ್ಯಥೆಯ ನೈದವೆ
ನಿರುತದಿಂ ದಿರುತಿಹರು ಸುಖದಲಿ ಪಾರ್ಥ ಕೇಳೆಂದ ॥ ೨

ಮುನ್ನ ಮೂಲಪ್ರಕೃತಿ ತಾನೇ
ಯೆನ್ನ ಯೋನಿಯೆನಿಪ್ಪು ದದರಲಿ
ಭಿನ್ನಸಚರಾಚರದ ಗರ್ಭವನಿರಿಸುವೆನು ನಾನು ।
ಸನ್ನಿಹಿತವಾ ಗದರದೆಸೆಯಿಂ
ದುನ್ನವಹ ಭೂತಂಗಳಿಗೆ ಸಂ
ಪನ್ನಜನನವು ದೊರಕುವುದು ಕಲಿ ಪಾರ್ಥ ಕೇಳೆಂದ ॥ ೩

ಸಕಲಸುರನರತಿರ್ಯಗಾದಿ
ಪ್ರಕರಯೋನಿಗಳಲ್ಲಿ ಜನಿಸುವ
ನಿಖಿಲ ಮೂರ್ತಿಗಳೀಸವಕೆ ನಾಂ ಒಂದೆ ಕರುಣಿಸಿದ ।
ಪ್ರಕೃತಿಯೇ ಸುಕ್ಷೇತ್ರವಿಶ್ವಾ
ತ್ಮಕನು ನಾಂ ಬೀಜಪ್ರದಾಯಕ
ಸಕಲಲೋಕಕೆ ತಂದೆಯಾಗಿಹೆನೆಂದನಸುರಾರಿ ॥ ೪

ಸತ್ವರಜತಮವೆಂಬ ಪೆಸರನು
ಪೆತ್ತು ತೋರ್ಪ ಗುಣತ್ರಯಂಗಳ
ಮಿತ್ತ ಮೂಲಪ್ರಕೃತಿಯಿಂದವೆ ಜನಿಸಿ ದೇಹದಲಿ ।
ನಿತ್ಯನವ್ಯಯನಾತ್ಮನನು ಪಿಡಿ
ದೆತ್ತಿ ಬಂಧಿಸುತಿಹುವು ಕನಸಿನ
ಕತ್ತಲೆಯಲಿಹ ಕಳ್ಳನಂದದಿ ಪಾರ್ಥ ಕೇಳೆಂದ ॥ ೫

ಆ ಗುಣತ್ರಯದೊಳಗೆ ಸತ್ವವು
ಬೇಗ ನಿರ್ಮಲವಾದ ಕತದಿಂ
ಭೋಗಿಸಲು ಸರ್ವಪ್ರಕಾಶವು ತಿಳಿ ಯನಾಮಯವು ।
ಯೋಗತತ್ವಜ್ಞಾನಸುಖ ಸಂ
ಯೋಗದಿಂ ಪುರುಷನನು ಬಂಧಿಸ
ಲಾಗಿ ತಾನಿಂತಿರುತಿಹನು ಕಲಿ ಪಾರ್ಥ ಕೇಳೆಂದ ॥ ೬

ಘನರಜೋಗುಣವಾರ್ತೆ ಸಂಗತಿ
ಜನಿತ ಲೋಹಿತವರ್ಣ ವೆಂದದ
ನನುನಯದಿ ತಿಳಿ ಯಾರಜೋಗುಣ ದೇಹಿಯನು ಪಿಡಿದು ।
ಅನವರತ ಸತ್ಕರ್ಮಸಂಗದಿ
ಮನುಜನನು ಬಂಧಿಸುಗು ಕುಂತೀ
ತನಯ ಕೇಳಿದ ನೆಂದನಾಮುರವೈರಿ ಕರುಣದಲಿ ॥ ೭

ಉರವಣಿಸಿ ದಜ್ಞಾನದಿಂವಿ
ಸ್ತರದಲುದಯಿಸಿ ದಾತಮೋಗುಣ
ಸುರನರಾದಿಗಳೆಲ್ಲರನು ಮೋಹಿಸುವು ದದುತಾನೇ ।
ಇರೆಪ್ರಮಾದಾಲಸ್ಯ ನಿದ್ರಾ
ಭರದಿ ಬಂಧಿಸಿಕೊಂಡಿಹುದು ಸಂ
ಗರವಿಜಯಿ ಕೇಳೈ ನಿದಾನ ವಿದೆಂದನಸುರಾರಿ ॥ ೮

ಸತ್ವಗುಣ ಸುಖದಲ್ಲಿ ಪುರುಷನ
ಹತ್ತಿಸುವುದು ರಜೋಗುಣವು ತಾ
ವಿಸ್ತರದ ಕರ್ಮದಲಿ ಕೂಡಿಸುತಿಹುದು ಮನುಜನನು ।
ಮತ್ತೆ ಜ್ಞಾನವ ಮುಸುಕಿ ದೇಹಿಯ
ಚಿತ್ತವನು ಮರವೆಯಲಿ ನೆರೆ ಕೂ
ಡುತ್ತಲಿಹುದು ತಮೋಗುಣವು ಕಲಿಪಾರ್ಥ ಕೇಳೆಂದ ॥ ೯

ರಜತಮಂಗಳ ಗೆಲಿದು ಸತ್ವವು
ನಿಜದಿ ತಾನುದಯಿಪುದು ಬೇಗದಿ
ರಜವು ಸತ್ವತಮಸ್ಸುಗಳ ಪರಿಭವಿಸಿ ಜನಿಸುವುದು ।
ರಜವನೀಸತ್ವವನು ಸೋಲಿಸಿ
ತ್ರಿಜಗದೊಳ ಗುದಯಿಸುವುದೀತಮ
ವಿಜಯ ಕೇಳೈ ಮೂರುಗುಣ ವೀತೆರದೊಳಮವೆಂದ ॥ ೧೦

ತನುವಿನೀಸಕಲೇಂದ್ರಿಯಂಗಳ
ಮನೆಯ ತದ್ದ್ವಾರಂಗಳಲಿ ಸಂ
ಜನಿಸುಗೆಚ್ಚರು ಮತ್ತೆ ತತ್ವಜ್ಞಾನ ಚಿತ್ತದಲಿ ।
ಅನುನಯದ ಲಾವಾಗಲುದಿಸುಗು
ವಿನಯದಿಂ ಕೇಳಾಗ ಸತ್ವದ
ಘನವೆನಿಪ ಗುಣ ಹೆಚ್ಚಿ ತೆಂದಿಂತರಿಯ ಬೇಕೆಂದ ॥ ೧೧

ಘನರಜೋಗುಣ ಹೆಚ್ಚಿರಲ್
ತನುಭವಾದಿಗಳಲ್ಲಿ ಲೋಭವು
ಮನದೊಳತ್ಯುದ್ಯೋಗ ಕರ್ಮಾರಂಭ ಸತಿಕೋಪ ।
ಜನಿತು ವಿಷಯಸ್ಪೃಹೆಯನಿತು ಸಂ
ಜನಿಸುವವು ಸಂಸಾರಿಗಳಿಗೆಲೆ
ಮನುಜರೊಳಗುತ್ತಮನೆ ಕೇಳೆಂದನು ಮುರಧ್ವಂಸಿ ॥ ೧೨

ಮರವೆ ನಿದ್ರಾಲಸ್ಯ ಮೂಢತೆ
ಬೆರಗುವಡೆದುದ್ಯೋಗ ಶೂನ್ಯತೆ
ನಿರುಗೆಯಿಂ ನಿಜತತ್ವದೆಚ್ಚರದಿಲ್ಲದಿರುತಿಹುದು ।
ನೆರೆ ತಮೋಗುಣ ಹೆಚ್ಚಲಿನಿತುಂ
ಮರೆಯಲೇ ಜನಿಸುತ್ತಲಿಹುವಿದ
ನರಿವುದೈ ಕುರುನಂದನನೆ ನೀನೆಂದನಸುರಾರಿ ॥ ೧೩

ಮತ್ತೆ ಕೇಳೈ ಪಾರ್ಥ ದೇಹಿಯು
ಸತ್ವಗುಣವಾವಾಗಹೆಚ್ಚಿರ
ಲಿತ್ತಮರಣವ ನೈದಿದಾಕ್ಷಣದಲ್ಲಿ ಸುಖದಿಂದ ।
ತತ್ವವಿತ್ತುಗ್ಗಳೈದೆ ನೆಲಸಿ
ದುರ್ತ್ತಮದ ಲೋಕಂಗಳನು ತಾ ।
ಸತ್ವವಾಗಿಯೆ ಸಾರುವನು ಕಲಿ ಪಾರ್ಥ ಕೇಳೆಂದ ॥ ೧೪

ನರ ರಜೋಗುಣ ಹೆಚ್ಚಿದಾಗಲು
ಮರಣವನು ತಾನೈದಿ ಕರ್ಮದ
ಪರಮಸಂಗವನುಳ್ಳ ಮಾನವನಲ್ಲಿ ಜನಿಸುವನು ।
ನಿರುತವಾಪರಿಯಲಿ ತಮೋಗುಣ
ಪ್ರಬಲಿಸಿ ಮೃತನಾದವನು ಕೇ
ಳ್ಧರೆಯೊಳಗೆ ಬಹ ಮೂಢಯೋನಿಗಳಲ್ಲಿ ಜನಿಸುವನು ॥ ೧೫

ವಿತತಸತ್ಕರ್ಮಂಗಳಿಗೆ ಮುಂ
ದುದಯಿಸುವ ನಿರ್ಮಲಸುಖವು ತಾ
ಪದಮಲದ ಸಾತ್ವಿಕಗುಣಕೆ ಫಲವೆಂದು ಹೇಳುವರು ।
ತುದಿಗೆ ದುಃಖವಿಕಾರ ರಂಜಿಸಿಂ
ಗುದಿಸಿ ತೋರುವ ಫಲ ತಮಸ್ಸಿಂ
ಗುದಯಿಸುವು ದಜ್ಞಾನ ಫಲವೆಂದನು ಮುರಧ್ವಂಸಿ ॥ ೧೬

ಸತ್ವಗುಣದಿಂ ಜ್ಞಾನಮುದಿಸುಗು
ಮತ್ತೆ ರಾಜಸಗುಣದದೆಸೆಯಿಂ
ಚಿತ್ತದಲಿ ಘನಲೋಭವಹುದು ತಮೋಗುಣದದೆಸೆಯಿಂ ।
ಮತ್ತತನ ವಧಿಕ ಪ್ರಮಾದವು
ಬಿತ್ತರದೊ ಳಜ್ಞಾನಮುಂ ಬೆಂ
ಬತ್ತಿ ಜನಿಸುತ್ತಿಹುವು ಕೇಳೆಂದನು ಮುರಧ್ವಂಸಿ ॥ ೧೭

ಸತ್ವಗುಣವುಳ್ಳವರು ಸೇರುವ
ರುತ್ತಮದ ಲೋಕಂಗಳನು ಕೇ
ಳ್ಮತ್ತೆರಾಜಸರೈದುವರು ಮನುಜಾದಿಲೋಕವನು ।
ಇತ್ತ ತಾಮಸಗುಣದವರು ಬೀ
ಳುತ್ತಿಹರು ನರಕಾದಿಲೋಕದ
ಮೊತ್ತದೊಳ ಗೆಲೆಪಾರ್ಥ ಕೇಳೆಂದನು ಮುರಧ್ವಂಸಿ ॥ ೧೮

ಅರಿಯಬಲ್ಲವ ನೀಜಗತ್ತಿಂ
ಗುರುವ ತ್ರಿಗುಣವೆ ಕರ್ತೃವಲ್ಲದೆ
ಹೊರಗೆ ಮತ್ತಿನ್ನೊಬ್ಬನಿಲ್ಲೆಂ ದೀಗುಣತ್ರಯದ ।
ನಿರುಗೆಗಾಂ ಬೇರೆಂದದಾವವ
ನರಿವನಹ ನವನೆನ್ನಭಾವವ
ಮರೆಯದೈದುವನೈ ಧನಂಜಯ ಎಂದನಸುರಾರಿ ॥ ೧೯

ದೇಹಿ ಯೀದೇಹದಲಿ ಜನಿಸಿದ
ಬಾಹ ಮೂರುಂಗುಣಗಳಂ ವ್ಯಾ
ಮೋಹವಿಲ್ಲದೆ ಮೀರಿ ಜನಿಮೃತಿಜರೆಯ ದುಃಖಗಳ ।
ದೇಹದಿಂ ಬಿಡುಗಡೆಯ ನೈದೀ
ದೇಹ ಬೀಳಲು ಮುಕ್ತಿಯನು ಸಂ
ದೇಹವಿಲ್ಲದೆ ಪಡೆವನೈ ಕಲಿ ಪಾರ್ಥ ಕೇಳೆಂದ ॥ ೨೦

ಆವಕುರುಹಿಂ ದರಿಯಬಹುದೆಲೆ
ದೇವ ಈಗುಣಮೂರ ಮೀರಿದ
ಜೀವರೊಳಗುತ್ತಮನ ನೀತ್ರಿಗುಣಂಗಳೆಂಬುದನು ।
ಆವಪರಿಯಿಂ ಮೀರುವನು ಮ
ತ್ತಾವಪರಿಯಿಂ ಬೆರಸಿರುವನಿದ
ನೀವು ಮುದದಿಂ ದೊರೆಯಬೇಕೆನ ಗೆಂದನಾ ಪಾರ್ಥ ॥ ೨೧

ಎಲವೊಪಾಂಡವ ಗುಣಸಮೂಹದ
ಫಲವೆನಿಸುವ ಪ್ರಕಾಶವನು ನೆರೆ
ಬಲುಹನುಳ್ಳ ಪ್ರವೃತ್ತಿಯುಮ ಸಜ್ಞಾನವೆಂಬುದನು ।
ಒಲಿದು ಬಂದೊಡೆ ತೋಷಹೊದ್ದದೆ
ಕಳಿಯೆ ಬಯಸನವಂ ತ್ರಿಗುಣವನು
ಗೆಲಿದ ಪುರುಷನ ಚಂದವಿದು ಕೇಳೆಂದನಸುರಾರಿ ॥ ೨೨

ಮುನಿಯದಿಹ ಮಾನವ ನುದಾಸೀ
ನನವೋಲಿರುತೀ ಮೂರುಗುಣದಿಂ
ದನವರತ ಮಿಡುಕಾಡ್ಯನೆನಿಪನು ಸಕಲದೇಹದಲಿ ।
ಘನಗುಣಂಗಳು ನಡೆಯುತಿಹುವೆಂ
ದಿನಿತುವನು ಬಲ್ಲಾತನೇ ಈ
ತನುವಿನಿಷ್ಟೆಯಲಿರ ಕಣಾ ಕಲಿ ಪಾರ್ಥ ಕೇಳೆಂದ ॥ ೨೩

ಆವನೀಸುಖದುಃಖದಲಿ ಸಮ
ಭಾವವುಳ್ಳವ ಸ್ವಸ್ವರೂಪಿನ
ಭಾವನಿಷ್ಠನು ಹೊನ್ನು ಕಲುಹೆಂಟೆಯಲಿ ಸಮಮತಿಯು ।
ಆವ ನಿಂದಾಸ್ತುತಿಗಳಲಿ ಸಮ
ನಾವ ಪ್ರಿಯವಪ್ರಿಯವನೆಲ್ಲವ
ಭಾವಿಸಲು ಸರಿಯಾಗರಿವ ನವ ಧೀರ ಕೇಳೆಂದ ॥ ೨೪

ಆವ ನೀಬಹುಮಾನದಲಿ ಮ
ತ್ತಾವ ನೀಯವಮಾನದಲಿ ಸಮ
ನಾವವನು ಮಿತ್ರರಲಿ ಶತ್ರುಗಳಲ್ಲಿ ಸಮನಹನು ।
ಆವ ನುದ್ಯೋಗಂಗಳೆಲ್ಲವ
ಭಾವಿಸದೆ ಬಿಟ್ಟಾತನೈ ಗುಣ
ಭಾವವನು ಮೀರಿದವನೆನಿಸುವ ನವನು ಕೇಳೆಂದ ॥ ೨೫

ಆವ ನೆನ್ನನು ಪಲ್ಲಟಸದೆಯೆ
ಭಾವಭಕ್ತಿಯ ಯೋಗದಿಂ ನೆರೆ
ಸೇವಿಸುತಲಿಹ ನಾತ ನೀತ್ರಿಗುಣಂಗಳಂ ಮೀರಿ ।
ಪಾವನೋತ್ತಮಬ್ರಹ್ಮನಹುದಕೆ
ಜೀವರೊಳು ನಿಷ್ಪಾಪನಹ ನಿಂ
ತಾವಿಮಲವೇದಾಂತಸಿದ್ಧವಿ ದೆಂದನಸುರಾರಿ ॥ ೨೬

ಸ್ಥಿರವೆನಿಪ ವೇದಕ್ಕೆ ಪಿರಿದಹ
ಪರಮಮುಕ್ತಿಗೆ ನಿತ್ಯವೆನಿಸುವ
ನಿರುತ ಧರ್ಮಕೆ ಪಿರಿದೆನಿಪ ವೇದಾಂತನಿಜಸುಖಕೆ ।
ಪರಿಕಿಸಲಿಕಿವಕೆಲ್ಲಕಂ ನಾ
ನಿರುವೆನೈ ನೆಲೆಯಾಗಿ ನೀನೆಲೆ
ನರನೆ ಕೇಳೊಲಿ ದೆಂದನಸುರಾರಾತಿ ಕರುಣದಲಿ ॥ ೨೭

- ಇಂತು ಗುಣತ್ರಯಭಾಗಯೋಗವೆಂಬ ಹದಿನಾಲ್ಕನೇ ಅಧ್ಯಾಯ ಸಂಪೂರ್ಣ -

## ಹದಿನೈದನೇ ಅಧ್ಯಾಯ - ಪುರುಷೋತ್ತಮಪ್ರಾಪ್ತಿಯೋಗ

ಸೂಚನೆ ॥ ತನುವೆನಿಪ ವೃಕ್ಷವನು ಮತ್ತೆ
ತನುವ ಧರಿಸಿಹ ಪುರುಷನನು ನೆ
ಟ್ಟನೆ ತಿಳಿವವೊಲು ವಿವರಿಸಿದ ನರ್ಜುನಗೆ ಮುರವೈರಿ ॥

ಬೇರು ಮೊದಲಾಗಿಹುದು ಕೊಂಬು ವಿ
ಕಾರದಿಂ ಕೆಳಗಾಗಿಹುವು ಸಂ
ಸಾರವೃಕ್ಷಕೆ ಸಕಲಶ್ರುತಿಗಳೆ ಯೆಲೆಗಳಾಗಿಹುವು ।
ವೀರ ಕೇಳಶ್ವತ್ಥವೆನಿಸುವು
ದಾರವೃಕ್ಷವದವ್ಯಯವು ತಾ
ವಾರರಿವರಿದ ನವರುಶ್ರುತಿವಿದ ರೆಂದನಸುರಾರಿ ॥ ೧

ಮೆರೆಯುತಿಹ ಸಂಸಾರವೃಕ್ಷ
ಕ್ಕಿರುವ ಪರಬ್ರಹ್ಮಮೂಲವು
ನಿರುಗೆಯಿಂ ಮಹದಾದಿತತ್ವವು ಶಾಖೆಯೆನಿಸುವುದು ।
ಬೆರಗಿದೇಕ್ಕೆ ಶ್ರುತಿ ನಿಕರ ಪರ್ಣವು
ಮರವೆಯಿಂದಂ ನಿತ್ಯವರಿವಿಂ
ಹರಿವುದಾಗ ಯನಿತ್ಯವಿದನರಿದವನೆ ಶ್ರುತಿವಿದನು ॥ ೨

ಈ ಮರದ ತುದಿಮೊದಲುನಡುಗಳು
ನಾಮರೂಪಗ ಳಾವವಿಧದಿಂ
ದೀಮಹಿಯ ಮೇಲರಿಯಬಾರದು ಬೇರುವರಿದಿರ್ಪ ।
ಈಮರನ ನಿಸ್ಸಂಗವೆನಿಸಿದ
ನಾಮಯದ ವರಶಸ್ತ್ರದಿಂ ನಿ
ಸ್ಸೀಮಯೋಧನು ಕಡಿದು ಮುಕ್ತಿಯ ಪಡೆಯಬೇಕೆಂದ ॥ ೩

ಅದರಸಂತರದಲ್ಲಿ ಯಾನಿಜ
ಪದವನರಿಯಲುಬೇಕು ನೋಡೈ
ಯದರಲೈಕ್ಯವ ಪಡೆದವರು ತಿರುಗರು ಮರಳಿ ಭವಕೆ ।
ನಿರುತದಿಂ ದಾರಿಂದ ತೋರಿತು
ಮೊದಲನಾದಿಯ ಸೃಷ್ಟಿ ಯಾತನ
ಪದವನೈದುವೆನೆಂದು ಯತ್ನವ ಮಾಡಬೇಕೆಂದ ॥ ೪

ಸಂಗದೋಷವ ಕಳದು ಹಮ್ಮುವ
ಹಮ್ಮುಗಳಳಿದ ನಿವೃತ್ತಕಾಮರು
ಹಿಂಗದೀಸುಖದುಃಖದ್ವಂದ್ವದಿ ಬಿಡಿಸಿಕೊಂಡವರು ।
ಅಂಗವಳಿ ದಧ್ಯಾತ್ಮನಿಷ್ಠರು
ತುಂಗವಿಕ್ರಮತತ್ವವಿದ ರಾ
ಮಂಗಳೋತ್ತಮನಿತ್ಯಪದ ವೈದುವರು ಕೇಳೆಂದ ॥ ೫

ಆವುದಾವೊಂದಮಲಪದವನು
ಪಾವಕನು ರವಿಶಶಿಗಳೆಂಬೀ
ಮೂವರುಂ ನೆರೆ ಬೆಳಗಲರಿಯರು ತಮ್ಮ ಹಬೆಯಿಂದ ।
ಆವುದನು ಸೇರಿದರೆ ಮರಳರು
ಪಾವನೋತ್ತಮವೆನಿಪ ಪದವದು
ಭಾವಿಸಲು ತಾನೆನ್ನಪದವೈ ಪಾರ್ಥ ಕೇಳೆಂದ ॥ ೬

ನರನೆ ಕೇಳೀಜೀವಲೋಕದ
ಲುರವಣಿಸುವ ಷಡಿಂದ್ರಿಯಂಗಳು
ಭರದಿ ಪ್ರಕೃತಿಸ್ಥಂಗಳಾಗಿಯೆ ವಿಷಯಸಂಗದಲಿ ।
ಇರಲವನು ಸೆಳೆಯುತ್ತ ಜೀವನು
ಪಿರಿದು ಪೆಸರಿಂದಿರುವ ಪುರುಷನು
ನಿರುತದಿಂದೆನ್ನಂಶವೆಂದರಿಯೆಂದನಸುರಾರಿ ॥ ೭

ಆತ ತಾನಾವಾವ ದೇಹವ
ನೋತು ಪೊಗುವನು ಮತ್ತಿರದೆ ತಾ
ನಾತನುಗಳನು ಬಿಸುಟು ಪೊರಮಡುವಾಸಮಯದಲ್ಲಿ ।
ವಾತ ಪುಷ್ಪದ ಪರಿಮಳವನೊ
ಯ್ವಂತೆರದ ಲಾ ಇಂದ್ರಿಯವ ಜೀ
ವಾತುಮನು ತೆಗೆದೊಯ್ವನೆಲೆ ಕಲಿ ಪಾರ್ಥ ಕೇಳೆಂದ ॥ ೮

ಈಪರಿಯ ಜೀವಾತ್ಮ ಶ್ರೋತ್ರವ
ದೀಪಿಸುವ ನೇತ್ರವನು ತ್ವಕ್ಕನು
ಮಾಪರಿಯ ರಸನೆಯನು ಘ್ರಾಣವ ಮನವನುಂಕೂಡಿ ।
ರೂಪುರಸಗಂಧಾದಿ ವಿಷಯಕ
ಲಾಪವನು ಭೋಗಿಸುತಿಹನು ಚಿ
ದ್ರೂಪನಲ್ಲದೆ ತಾ ವಿಚಾರಿಸೆ ಬೇರೆಯಲ್ಲೆಂದ ॥ ೯

ದೇಹವನು ಬಿಡವಾತನುಮ ನೀ
ದೇಹದೊಳಗಿರ್ಪಾತನುಮ ನೀ
ದೇಹಗುಣವನು ಕೂಡಿ ವಿಷಯಂಗಳನು ಭೋಗಿಸುವ ।
ದೇಹಿಯನು ತಾವರಿಯರಾತ್ಮ
ದ್ರೋಹಿಮೂಢರು ಜ್ಞಾನಿಗಳು
ಸಂದೇಹವಿಲ್ಲದೆ ಕಾಣುತಿಹರೆಲೆಪಾರ್ಥ ಕೇಳೆಂದ ॥ ೧೦

ಪರಮಮುನಿಗಳು ಯತ್ನದಿಂ ಕಾಂ
ಬರು ಕಣಾ ಜೀವಾತ್ಮ ನೇ ನಿ
ರ್ಧರಿಸಿನೋಡಲು ತಮ್ಮೊಳಿಹ ಪರಮಾತ್ಮನೆಂದಿಂತು ।
ದುರುಳ ರಂತಃಕರಣ ಶುದ್ಧಿಯ
ದೆರವೆನಿಸುವಜ್ಞರುಗ ಳಾತ್ಮನ
ಪಿರಿದು ಯತ್ನವಮಾಡಿಯುಂ ಕಾಣರು ಕಣಾ ಎಂದ ॥ ೧೧

ಇಂದು ಸೂರ್ಯಾಗ್ನಿಗಳ ಲಾವುದ
ದೊಂದು ತೇಜವೆ ನಿಖಿಳಜಗವನು
ಕುಂದದನುದಿನ ಬೆಳಗುತಿರುತಿಹ ದಾಪ್ರಕಾಶವನು ।
ತರದೆ ನೀನರಿ ಯೆನ್ನ ನಿಜಸಂ
ಬಂಧವೆಂದಿದ ನಖಿಳಶ್ರುತಿಮುಖ
ದಿಂದ ಪೇಳುತ್ತಿಹರು ಜ್ಞಾನಿಗ ಳೆಂದನಸುರಾರಿ ॥ ೧೨

ಭೂತಳವ ನೊಳಪೊಕ್ಕು ಭೂತ
ವ್ರಾತವನು ನಾನೆನ್ನ ಬಹುಹಿಂ
ದೋತು ಧರಿಸುತ್ತಿಹೆನು ತಿಳಿ ಬಳಿಕುದಕಮಯವೆನಿಪ ।
ಶೀತಕರ ನಾನಾಗಿ ಕೇಳೀ
ಭೂತಳದ ಲೋಷಧಿವನಸ್ಪತಿ
ಜಾತವೆಲ್ಲವ ಬೆಳಸುತಿಹೆ ನೆಲೆ ಪಾರ್ಥ ಕೇಳೆಂದ ॥ ೧೩

ಬಳಿಕ ವೈಶ್ವಾನರನು ನಾನಾ
ಗುಳಿದಖಿಲಜೀವಿಗಳ ದೇಹಂ
ಗಳನು ಸಂಶ್ರಯಿಸುವೆನು ಪ್ರಾಣಾಪಾನದೊಡಗೂಡಿ ।
ತಿಳಿಯೆ ನಾಲುಕುಪರಿಜಿ
ನನ್ನಂಗಳನು ಜೀರ್ಣಿಸುತಿಹೆನು ಕೇಳಾ
ನುಳಿಯೆ ಪೊರೆವವರಿಲ್ಲ ವಿಶ್ವವನೆಂದನಸುರಾರಿ ॥ ೧೪

ಸಕಲರಂತಃಕರಣದೊಳು ಸು
ವ್ಯಕುತದಿಂ ದಿರುತಿರ್ಪೆನೆನ್ನಿಂ
ಪ್ರಕಟದಿಂ ಜ್ಞಾನಸ್ಮೃತಿಗ ಳಜ್ಞಾನವಿಸ್ಮೃತಿಯೂ ।
ಸುಕರನಾ ಗರುಹಿಸಿಕೊಳುತ್ತಿಹೆ
ನಖಿಲಶ್ರುತಿವಚನಂಗಳಿಂ ನಾ
ನಿಖಿಲವೇದಾಂತಾರ್ಥಕರ್ತನು ವೇದವಿದನೆಂದ ॥ ೧೫

ಈಪರಿಯ ಲತಿಗೋಪ್ಯವಹ ನಿಜ
ರೂಪಬೋಧಕಶಾಸ್ತ್ರದರ್ಥ ನಿ
ರೂಪಿತವು ನಿನಗಾದುದೆನ್ನಿಂ ದಿದನು ಲೇಸಾಗಿ ।
ವ್ಯಾಪರಿಸಿ ತಿಳಿಯಲ್ಕೆ ತತ್ವದ
ರೂಪರಿದು ಕೃತಕೃತ್ಯನಹೆಯೆಂ
ದೀಪರಿಯ ಹರಿ ತಿಳುಹಿದನು ಧೃತರಾಷ್ಟ್ರಕೇಳೆಂದ ॥ ೨೦

- ಇಂತು ಪುರುಷೋತ್ತಮಪ್ರಾಪ್ತಿಯೋಗವೆಂಬ
ಹದಿನೈದನೇ ಅಧ್ಯಾಯ ಸಂಪೂರ್ಣ -

---

## ಹದಿನಾರನೇ ಅಧ್ಯಾಯ - ದೈವಾಸುರಸಂಪದ್ವಿಭಾಗ ಯೋಗ

ಸೂಚನೆ ॥ ನಿರುತದಿಂ ದೈವಾಸುರಗಳೆಂ
ಬೆರಡು ಪ್ರಕೃತಿವಿಭಾಗದಿಂದಿಹ
ನರರ ವರ್ತನೆಗಳನು ಹರಿ ಪಾರ್ಥಂಗೆ ಕರುಣಿಸಿದ ॥

ಅಭಯ ಸತ್ವದ ಶುದ್ಧಿ ದಾನದ
ವಿಭವ ಸಕಲೇಂದ್ರಿಯದ ನಿಗ್ರಹ
ಶುಭವೆನಿಪ ವರಯಜ್ಞ ಋಜುತನ ವೇದಪಠನೆಗಳು ।
ಅಭವನನು ಮೆಚ್ಚಿಸುವ ತಪವತಿ
ರಭಸವಿಲ್ಲದ ಜ್ಞಾನಯೋಗ
ಪ್ರಭೆಯನಿಲದಿವು ದೇವತಾಪ್ರಕೃತಿಗಳಿಗಹುವೆಂದ ॥ ೧

ಕೊಲ್ಲದಿರುಹವು ಸತ್ಯಭಾಷಿತ
ವೆಲ್ಲೆಡೆಯಲಕ್ರೋಧ ಕೊಂಡೆಯ
ನಲ್ಲದಿರುಹವು ಶಾಂತಿ ಲಜ್ಜೆಯಿಚಾಪಲಂ ತ್ಯಾಗ ।
ಸಲ್ಲಲಿತದಯೆ ಜೀವಿಮಾತ್ರದೊ
ಳೆಲ್ಲಿಯುಂ ವೈರಾಗ್ಯ ಮೃದುತನ
ವೆಲ್ಲವಿವು ದೈವಪ್ರಕೃತಿಗಳು ಎಂದನಸುರಾರಿ ॥ ೨

ದೇವತಾಪ್ರಕೃತಿಯಲಿ ಜನಿಸುವ
ನಾವನಾತಂ ಗಳಿಕತೇಜವು
ಪಾವನದ ಸೈರಣೆ ಮಹಾಧೃತಿ ಯಿತ್ತೆರದ ಶೌಚ ।
ಜೀವಬಾಧೆಯ ಬೇಡುವು ದೀತನು
ಭಾವದಭಿಮಾನಿಕೆಯನುಳಿದಿರ
ವೀವಸುಧೆಯೊಳು ಸಂಭವಿಸುವವು ಪಾರ್ಥ ಕೇಳೆಂದ ॥ ೩

ಆಸುರಪ್ರಕೃತಿಯ ಲುದಿಸಿದವ
ಗೀಸು ಗುಣವುದ್ಭವಿಪು ವೆಂದೆನೆ
ಬೇಸರದೆ ಕೇಳೈ ಧನಂಜಯ ದಂಭವಭಿಮಾನ ।
ರೋಷ ದರ್ಪ ಸಮಸ್ತ ಜನಮಂ
ಕ್ಲೇಶಗೊಳಿಸುವ ಬಹುಳನಿಷ್ಠುರ
ಭಾಷೆ ಯಿಂತಜ್ಞಾನ ಜನಿಸುವು ವೆಂದನಸುರಾರಿ ॥ ೪

ವಿದಿತದೈವಪ್ರಕೃತಿಯೆಂಬುದು
ಸದಮಲದ ಮೋಕ್ಷಕ್ಕೆ ಕಾರಣ
ವೊದವಿದೀಸಂಸಾರಬಂಧನ ಕಾಸುರಪ್ರಕೃತಿ ।
ಪದುಳದಿಂ ಕಾರಣವೆನಿಸುತಿಹು
ದಿದರೊಳಗೆ ದೈವಪ್ರಕೃತಿಯೊಳ
ಗುದಿಸಿದವನಾಗಿರ್ಪೆ ಶೋಕಿಸಬೇಡ ನೀನೆಂದ ॥ ೫

ನಿರುತವೀಲೋಕದಲಿ ದೈವಾ
ಸುರರೆನಿಸಿದಿತ್ತೆರದ ಪ್ರಜೆಗಳು
ಭರದಿ ನಿರ್ಮಿತರಾಗಿರುವ ರವರೊಳಗೆ ನಾಂ ನಿನಗೆ ।
ಒರೆದೆ ದೈವಪ್ರಕೃತಿಯನು ವಿ
ಸ್ತರದಲಾಸುರಪ್ರಕೃತಿಯನು ಮುಂ
ದೊರೆವೆ ಸವಧಾನದಲಿ ಕೇಳೆಂದನು ಮುರಧ್ವಂಸಿ ॥ ೬

ಅರಿಯ ರೀಭವಬಂಧಕರ್ಮವ
ನರಿಯ ರೀಭವ ರೋಹ ಕರ್ಮವ
ಮೆರೆಯುವಾಸುರಸಂಪದದ ಲುದಯಿಸುವ ಮಾನವರು ।
ಉರುವ ಬಾಹ್ಯಾಂತರವಿಶುದ್ಧತೆ
ಮೆರೆವ ಸತ್ಯಾಚಾರವೆಂಬಿವು
ನಿರುಗೆಯಿಂ ದಿಲ್ಲವರಿಗೆಲೆ ಕಲಿಪಾರ್ಥ ಕೇಳೆಂದ ॥ ೭

ಮುದುಳರಾಶಾಪಾಶಗಳ ಸಾ
ವಿರಗಳಿಂ ಬಿಗಿವಡೆದು ಭೋಗಾ
ತುರತೆಯಿಂದವರುಗಳು ಕಾಮಕ್ರೋಧಪರರಾಗಿ ।
ಪಿರಿದು ವಿಷಯಂಗಳಲಿ ಭೋಗವು
ದೊರಕಲೋಸುಗ ವರ್ಥನಿಚಯವ
ಪರವ ಬಿಟ್ಟನ್ಯಾಯದಿಂ ದಾರ್ಜಿಸುತಲಿಪರೆಂದ ॥ ೧೨

ಇದನು ನಾನಿಂದಾರ್ಜಿಸಿದೆ ಮುಂ
ದಿದರಲಹ ಬಯಕೆಯನು ಪಡೆವೆನಿ
ದಿದಕೊ ನನಗೀಗುಂಟು ಮರಳೀಧನವು ತಾನೆನಗೆ ।
ಹದುಳದಿಂ ದೊರಕೊಂಬುದೆಂದೀ
ಹದನನೇ ಚಿಂತಿಸುತಲಾಸುರ
ಪದದ ಮನುಜರು ಕೆಡುವ ರೆಲಿಕಲಿಪಾರ್ಥ ಕೇಳೆಂದ ॥ ೧೩

ಎನ್ನದೆಸೆಯಿಂ ದಳಿದನೀಹಗೆ
ಯಿನ್ನುಳಿದ ಹಗೆಗಳುಮ ನಳಿಯಿಪೆ
ನಿನ್ನು ಪೃಥ್ವೀಶ್ವರನು ನಾನೇ ಭೋಗಿ ಸುಖಿ ನಾನೇ ।
ಗನ್ನಗತಕಂಗಳನು ತಿಳಿದಿಹ
ಸನ್ನಿಹಿತಭುಜಬಲನು ನಾನೇ
ಉನ್ನತೋನ್ನತ ಸಿದ್ಧನೆಂಬನು ಪಾರ್ಥ ಕೇಳೆಂದ ॥ ೧೪

ಎಲ್ಲರಿಂ ದತಿಧನಿಕನಾನೇ
ಬಲ್ಲಿತಹ ಸತ್ಕುಲವನುಳ್ಳವ
ನಿಲ್ಲಿಸರಿ ಯಾರೆನ್ನೊಡನೆ ಬೇರೊಬ್ಬ ನವನಿಯಲಿ ।
ನಿಲ್ಲದೆಯೆ ಯಜ್ಞವನು ಮಾಡುವೆ
ನೆಲ್ಲರಿಗೆ ದಾನವನು ಕೊಡುವೆನು
ಘುಲ್ಲಿಸುತಿಹೆ ನೆಂಬನಜ್ಞನು ಪಾರ್ಥ ಕೇಳೆಂದ ॥ ೧೫

ಅಸುರಯೋನಿಯ ನೈದಿ ತೊಳಲುತ
ಬಸವಳಿದು ನರರಜ್ಞರಾಗಿಯೆ
ಹೊಸಪರಿಯ ನಾನಾಭವಂಗಳ ಲೆನ್ನನಿಜಪದವ ।
ಸಸಿನೆ ಸಾರದ ಕಥನದಿಂನಿ
ಪ್ಪಸರದಿಂ ನೆರೆ ಯಧಮಗತಿಯನು
ಪಶುಗಳಂದದ ಲೈದುವರು ಕಲಿ ಪಾರ್ಥ ಕೇಳೆಂದ ॥ ೨೦

ತನಗೆ ಕೇಡನು ಮಾಡುತಿರುವೀ
ಘನವೆನಿಪ ನರಕಕ್ಕೆ ಬಾಗಿಲು
ವಿನುತಮತಿ ತಿಳಿ ಮೂರು ತೆರನಾಗಿ ಹುದದೆಂತೆನಲು ।
ಜನಿತಕಾಮಕ್ರೋಧಲೋಭಗ
ಳಿನಿತ ನದುಕಾರಣದಿ ಬಿಡುವುದು
ಮನುಜನಾದವ ಸುಖವ ಪಡೆವೊಡೆ ಪಾರ್ಥ ಕೇಳೆಂದ ॥ ೨೧

ಈತಮೋದ್ವಾರಂಗಳಿಂ ನಿ
ರ್ಭೀತರಾಗಿಯೆ ಮೂರರಿಂ ವಿ
ಖ್ಯಾತಿಯಿಂ ಬಿಡುಗಡೆಯನೈದಿದ ಮಾನವರು ತಮ್ಮ ।
ನೂತನದ ಲೇಸಕ್ಕು ಮೇತರಿ
ನೋತದನೆ ಯಾಚರಿಪ ರದರಿಂ
ದಾತತುಕ್ಷಣ ಪಡೆವರೈ ಮೋಕ್ಷವನು ಕೇಳೆಂದ ॥ ೨೨

ಆವನೊಬ್ಬನು ಶಾಸ್ತ್ರವಿಧ್ಯು
ಕ್ತಾವಳಿಯ ಬಿಟ್ಟಖಿಲಕಾಮುಗು
ಣಾವಳಿಗಳಿಂ ಮನಕೆ ಬಂದಂದದಲಿ ಚರಿಸುವನು ।
ಭಾವಿಸಲಿಕವ ಸತ್ವಶುದ್ಧಿಯ
ಪಾವನದ ನಿಜಸುಖವ ಮುಕ್ತಿಯ
ನಾವಪರಿಯಿಂ ಪಡೆಯೆನೆಂದಸುರಾರಿ ಕರುಣಿಸಿದ ॥ ೨೩

ಅದುನಿಮಿತ್ತದಿ ಪಾರ್ಥ ಕರ್ತ
ವ್ಯದಲಕರ್ತವ್ಯದಲಿ ಭಾವದ
ಸಮಯದಲಿ ಶಾಸ್ತ್ರಪ್ರಮಾಣವು ನಿನಗೆ ಪರಿಕಿಸಲು ।
ವಿದಿತದಿಂದವೆ ಶಾಸ್ತ್ರದಲಿ ಹೇ
ಳಿದುದ ನೆರೆ ತಿಳಿದಖಿಲಕರ್ಮವ
ಹದುಳದಿಂ ಆಚರಿಸಲಿಕೆ ನೀನರ್ಹನಹೆ ಯೆಂದ ॥ ೨೪

- ಇಂತು ದೈವಾಸುರಸಂಪದ್ವಿಭಾಗಯೋಗವೆಂಬ
ಹದಿನಾರನೇ ಅಧ್ಯಾಯ ಸಂಪೂರ್ಣ -

---

# ಹದಿನೇಳನೇ ಅಧ್ಯಾಯ - ಶ್ರದ್ಧಾತ್ರಯವಿಭಾಗ ಯೋಗ

ಸೂಚನೆ ॥ ದಾನಯಜ್ಞತಪಂಗ ಳಿನಿತನು
ಮಾನವರ ಆಹಾರ ಭೇದವ
ದಾನವಾರಿ ನರಂಗೆ ಗುಣಭೇದದಲಿ ಬೋಧಿಸಿದ ॥

ಆರುಕೆಲಬರು ಶಾಸ್ತ್ರವಿಧಿಯನು
ಪಾರದೆಲ್ಲವ ಬಿಟ್ಟು ಭಕ್ತಿಯ
ಸೇರಿ ಯಜ್ಞಂಗಳು ಮಾಡುವರವರ ನಿಷ್ಠೆಯನು ।
ಸಾರಸಾತ್ವಿಕವೋ ರಜಸ್ಸಿನ
ಕಾರಿಯವೊ ತಾಮಸವೊ ಕರುಣಿಸು
ಶೌರಿ ಯೆಂದರ್ಜುನನು ಬಿನ್ನೈಸಿದನು ಭಕ್ತಿಯಲಿ ॥ ೧

ಎಲೆ ಧನಂಜಯ ಮೂರು ತೆರದಲಿ
ನೆಲಸಿಹುದು ವಿಶ್ವಾಸವಾವುದು
ನೆಲೆಗೆ ಜೀವರಿಗೆಲ್ಲ ಜನಿಸಿರ್ಕುಂ ಸ್ವಭಾವದಲಿ ।
ಲಲಿತಸಾತ್ವಿಕ ರಾಜಸವು ತಾ
ನುಳಿದ ತಾಮಸ ವೆನಿಪುದನು ನಿ
ರ್ಮಲದಲರಿವಂತುಸುರುವೆನು ಕೇಳೆಂದನಸುರಾರಿ ॥ ೨

ಅನಿಬರೆಲ್ಲರಿ ಗವರಬುದ್ಧಿಯ
ನೆನಪಿಗನುಗುಣವಾಗಿ ಭಕ್ತಿಯು
ಜನಿಸುತಿರ ಲಾಪುರುಷನೇ ತದ್ಭಕ್ತಿಮಯನಹನು ।
ವಿನುತನಾವವ ನಾವಗುಣದಲಿ
ಜನಿತಭಕ್ತಿಯನುಳ್ಳವನೊ ತ
ನ್ಮನದಲೇ ಯಜಿಸುತ್ತಿಹನು ಕೇಳೆಂದನಸುರಾರಿ ॥ ೩

ಸತ್ವಗುಣಯುಕ್ತರುಗಳೆಲ್ಲರು
ದುತ್ತಮೋತ್ತಮದೇವರನು ಯಜಿ
ಸುತ್ತಿಹರು ರಾಜಸರು ಕೇಳಾ ಯಕ್ಷರಾಕ್ಷಸರ ।
ನಿತ್ಯವಾಗಿಯೆ ಯಜಿಸುತಿಹ ರಿ
ನ್ನಿತ್ತ ಕೇಳ್ವೆ ತಾಮಸರುಗಳು
ಮತ್ತೆ ಭೂತಪ್ರೇತನಿಕರವ ಯಜಿಸುತಿಹರೆಂದ ॥ ೪

ಅರಹಂಕಾರಾತಿಡಂಭ ವಿ
ಕಾರಪೂರ್ವಕರಾಗಿ ವಿಷಯದ
ಸಾರಯುಕೆಯು ವರಿಸಿ ಪೌರುಷ ಬಲದ ಸಾತ್ರಯದಿ ।
ಚಾರುಶಾಸ್ತ್ರವಿಚಾರವಿಲ್ಲದೆ
ಘೋರತಪವನು ಮಾಳ್ಪ ರವರನು
ವೀರ ನೀನರಿ ಯಸುರರೆಂದೀಪರಿ ನಿಧಾನದಲಿ ॥ ೫

ಈತನುವಿನೊಳಗಿರ್ಪ ಭೂತ
ವ್ರಾತವನು ಕರಣೇಂದ್ರಿಯಂಗಳ
ನೋತು ತಪದಿಂ ಬಡವು ಮಾಡುವ ರಲ್ಪಬುದ್ಧಿಗಳು ।
ನೀತಿವಿದ ಕೇಳ್ವನು ಮನೊಳಗಿ
ರ್ಪಾತುಮನು ತಾನೆಸಿಸುವೆನ್ನನು
ನೀತಿಗಳಿಯುವರಸುರರೆಂದರಿ ಯೆಂದನಸುರಾರಿ ॥ ೬

ಸರ್ವಜನಕಾಹಾರವೆಂತೆನ
ಲುರ್ವಿಯೊಳು ತಾಂ ತ್ರಿವಿಧವಾಗಿಯೆ
ಸರ್ವಕಾಲದೊಳಿಯುದು ಯಜ್ಞವು ತಪದನುಷ್ಠಾನ ।
ಸರ್ವದಾನಂ ತ್ರಿವಿಧವವರೊಳ
ಪೂರ್ವದೆಸುವ ಭೇದವೆಲ್ಲವ
ಸರ್ವಭಾವದಿ ವಿವರಿಸುವೆ ಕೇಳೆಂದನಸುರಾರಿ ॥ ೭

ಆಯು ಬಲವಾರೋಗ್ಯ ಸತ್ವವ
ಮೇಯಸುಖ ವಿಂತಿನಿತಿನಿತನೀ
ಕಾಯದೊಳು ಹೆಚ್ಚಿಸುವ ರಸದಿಂ ಭರಿತವಾಗಿರ್ಪ ।
ಬಾಯಿಗತಿಮೃದು ನಯ ಮನೋಹರ
ಹಾಯವೆನಿಪಾಹಾರವೇ ಕೌಂ
ತೇಯನೇ ಪ್ರಿಯವಹುದು ಸಾತ್ವಿಕನಾದವಂಗೆಂದ ॥ ೮

ದಹಿಸಿ ವದನಾಂತರವ ದುಃಖಾ
ವಹವೆನಿಸಿ ಶೋಕಾಮಯಂಗಳ
ವಹಿಲದಿಂದಲಿ ಕೊಡುವ ಕಹಿ ಹುಳಿ ಲವಣ ವತಿತೀಕ್ಷ್ಣ ।
ಬಹಳ ಕರಿನವು ಬಿಸಿಯು ಮೆನಿಸಿದ
ಬಹುವಿಧಾಹಾರವದು ರಾಜಸ
ಸಹ ನರಂಗೆಂದುಂ ಪ್ರಿಯವು ಕೇಳೆಂದನಸುರಾರಿ ॥ ೯

ಆರಿದುದು ಹಳಸಿದುದು ರಸ ನೆರೆ
ಹಾರಿದುದು ಮಪವಿತ್ರವೆನಿಪುದು
ನಾರುವುದುಮೆಂಜಲಿನ ಬಹುದೋಷವನು ಧರಿಸಿದುದು ।
ತೋರುವಿನಿತರ ಭೋಜನವು ಮದ
ವೇರಿ ಮರೆದಿಹ ತಾಮಸಂಗೀ
ಧಾರಿಣಿಯೊಳಹುದಿಷ್ಟತಮವೆಲೆಪಾರ್ಥ ಕೇಳೆಂದ ॥ ೧೦

ಶ್ರುತಿವಿಹಿತದಿಂ ಯಜಿಸಬೇಕೆಂ
ಬತಿಶಯಾರ್ಥದಿ ನಿಲಿಸಿ ಮನವನು
ಸತತ ಫಲದಾಕಾಂಕ್ಷೆಯಿಲ್ಲದೆ ಪಾರಕಾಂಕ್ಷಿಗಳು ।
ಕ್ಷಿತಿಯೊಳಾವುದನೆಸಗುವವರು ಸ
ದ್ವ್ರತವದೇ ಸಾತ್ವಿಕರಿಗುಕ್ತ
ವ್ರತವೆನಿಸುತಿಹುದೈ ಧನಂಜಯ ಎಂದನಸುರಾರಿ ॥ ೧೧

ಫಲವ ನೆರೆ ಬಯಸುತ್ತಲೆಂದುಂ
ಹಲವು ಜನವನುವಂಚಿಸುವುದಕೆ
ಬಲಿದದಂಭಕ್ಕೋಸುಗರ ಮೀಲೋಕದಲಿ ಜನರು ।
ಒಲಿದು ಮಾಡುವ ಯಜ್ಞವೇ ತಾ
ನೆಲೆಗೆ ರಾಜಸವೆಂದು ತಿಳಿ ನೀ
ನೆಲೆಧನಂಜಯ ಎಂದು ಪುರುಷೋತ್ತಮನು ಕರುಣಿಸಿದ ॥ ೧೨

ವಿಧಿಗಳಿಲ್ಲದೆ ವೇದಮಂತ್ರದ
ಪದವನೊಲ್ಲದೆಯನ್ನ ದಾನವ
ಮುದದಿ ಮಾಡದೆ ದಕ್ಷಿಣೆಗಳಲಿ ಹೀನವೆನಿಸಿರ್ಪ ।
ಉದಯಿಸಿದ ವರಭಕ್ತಿಯಿಲ್ಲದ
ಮದಮುಖದ ಯಜ್ಞವನು ತಾಮಸ
ಪದವಿಯೊಂದೇ ಬಲ್ಲ ಹಿರಿಯರು ಪೇಳುತಿಹರೆಂದ ॥ ೧೩

ದೇವಭೂಸುರ ಗುರುಮಹಿತರನು
ಭಾವದಿಂ ದಾರಾಧಿಸುವುದಂ
ತಾವಗಂ ಬಾಹ್ಯಾಂತರದ ಶುಚಿತನವು ರುಜುಭಾವ ।
ಆವಿಶುದ್ಧಬ್ರಹ್ಮಚರ್ಯೆಯು
ಜೀವದಯೆ ಯೆಂಬಿನಿತು ದೇಹದ
ತಾಪಿನಲಿ ಜನಿಯಿಸುವ ತಪವೆನಿಸುವುದು ಕೇಳೆಂದ ॥ ೧೪

ಪ್ರಾಣಿಗಳಿಗಂಜಿಕೆಯ ಮಾಡದ
ವಾಣಿ ಸತ್ಯಪ್ರಿಯದವಾಕ್ಯ
ಶ್ರೇಣಿ ವೇದಾಧ್ಯಯನ ಮಂತ್ರಜಪಂಗಳೆಂಬಿನಿತು ।
ಕೇಣವಿಲ್ಲದೆ ಕೇಳು ಫಲುಗುಣ
ಮಾಣದಿದು ವಾಙ್ಮಯತಪವು ನೆರೆ
ಜಾಣರಿಂ ಪೇಳಿಸಿಕೊಳುತ್ತಿಹು ದೆಂದನಸುರಾರಿ ॥ ೧೫

ಮನದೊಳಗೆ ನಿರ್ಮಲತೆ ಸೌಮ್ಯತೆ
ಯನುನಯವು ತಾ ಮೌನ ಚಿತ್ತದ
ಘನನಿರೋಧವು ಭಾವವರಸಂಶುದ್ಧಿಯೆಂಬಿನಿತು ।
ಮನುಜರೊಳಗುತ್ತಮನೆ ಕೇಳೈ
ಮುನಿಗಳಿಂ ಮಾನಸದ ತಪವೆಂ
ದೆನಿಸಿ ಕೊಂಬುದು ಶಾಸ್ತ್ರಸಿದ್ಧವಿ ದೆಂದನಸುರಾರಿ ॥ ೧೬

ಫಲವ ಬಯಸದೆ ಯೋಗದಲ್ಲಿಯೆ
ನೆಲಸಿಕೊಂಡಿಹ ಮನುಜರಿಂ ಕೇ
ಳೊಲಿದು ಭಕ್ತಿಯನೆಸಗಿದುದು ಮೂತೆರದ ತಪದಲ್ಲಿ ।
ನೆಲೆಗೆ ಸಾತ್ವಿಕ ವೆನಿಸಿಕೊಳುತಿಹು
ದೆಲೆ ಧನಂಜಯ ಕೇಳು ತಾನಿದು
ಸುಲಭವಲ್ಲೈ ತಾಮಸರುಗಳಿಗೆಂದನಸುರಾರಿ ॥ ೧೭

ಹಿರಿಯರುಗಳಿವರೆಂದು ಲೋಕವು
ಭರದಿ ವಂದಿಸಿ ಸತ್ಕರಿಸಿ ವಿ
ಸ್ತರದ ಪೂಜೆಯ ಮಾಡಲೋಸುಗ ಡಂಭದಿಂ ಮಾಳ್ಪ ।
ನರರ ತಪ ತಾನಾವುದಿಂತದು
ಧರೆಯೊಳಗೆ ರಾಜಸವೆನಿಸಿ ಮ
ತ್ತಿರದೆ ಚಂಚಲವೆನಿಸುವುದು ಕಲಿಪಾರ್ಥ ಕೇಳೆಂದ ॥ ೧೮

ಮೂಢತನದಿಂದಾಗ್ರಹದಿ ಪರ
ಪೀಡೆಗೋಸುಗ ತನ್ನ ದಂಡಿಸಿ
ಮಾಡುತಿಹ ತಪವಾವುದದು ತಾನೇ ಧರಿತ್ರಿಯಲಿ ।
ಕೂಡೆ ತಾಮಸವೆನಿಸುತಿಹುದೆಂ
ದಾಡಿಕೊಂಬರು ಸಕಲಶಾಸ್ತ್ರದ
ಜಾಡನುರೆ ಬಲ್ಲವರುಗಳು ಕಲಿಪಾರ್ಥ ಕೇಳೆಂದ ॥ ೧೯

ಇನಿಸುಮುಪಕಾರವನು ಮಾಡದ
ಮುನಿಗೆ ಕೊಡಬೇಕೆಂಬ ಮತಿಯಿಂ
ವಿನಯದಿಂ ಕೇಳಾವ ದಾನವು ಪುಣ್ಯದೇಶದಲಿ ।
ದಿನದೊಳುತ್ತಮ ಪುಣ್ಯದಿನದಲಿ
ವಿನುತ ಸತ್ಪಾತ್ರದಲಿ ಮಾಡುವ
ಧನದ ದಾನವು ತನಗೆ ಸಾತ್ವಿಕವೆನಿಸುವುದು ಕೇಳು ॥ ೨೦

ಮರಳಿ ತನಗುಪಕಾರವನು ಮುಸಿ
ವರರುಗಳಲಿಚ್ಛೈಸಿ ಮೇಣಾ
ಸುರಪುರದ ಭೋಗಾದಿಗಳು ಮೊದಲಾದುವನು ಬಯಸಿ ।
ಇರದೆ ಕಾಡುತ ಕೊಡುವ ದಾನವು
ಭರದಿ ಕೇಳಿಂತಾವುದೊಂದಿದು
ನರನೆ ರಾಜಸವೆನಿಸುತಿಹುದೆಂದಸುರರಿಪು ನುಡಿದ ॥ ೨೧

ಲೇಸುಯೋಗ್ಯವನರಿಯದೇ ದು
ರ್ದೇಶಕಾಲವನರಿಯದೇ ನಾಂ
ದಾಸ ನಿಮಗೆಂದೆನುತ ಸತ್ಕರಿಸದೆ ಕುಪಾತ್ರದಲಿ ।
ಕ್ಲೇಶಪಡಿಸುತ್ತಾವುದಾನೊಂ
ದಾಸೆಯಿಂದವೆ ಕೊಡುವ ದಾನವ
ದೇಸುಪರಿಯಿಂ ತಾಮಸವು ತಾನೆನಿಸುತಿಹುದೆಂದ ॥ ೨೨

ವರ ಪರಬ್ರಹ್ಮಕ್ಕೆ ನಾಮವು
ನಿರುತದಿಂದವೆ ಮೂರು ತೆರನಾ
ಗಿರುತಲಿಹು ದೋಂ ತತ್ಸದೆಂದೆಂಬೀ ನಿರೂಪದಲಿ ।
ಪರಿವಿಡಿಯಲಾಬೊಮ್ಮದಿಂದವೆ
ಪಿರಿಯ ಸೃಷ್ಟಿಯಕಾಲದಲಿ ಭೂ
ಸುರರು ಸುತಿಗಳು ಯಜ್ಞವಿಂತಿವು ಮೊದಲಲುದಿಸಿದುವು ॥ ೨೩

ಅದುನಿಮಿತ್ತವೆ ವೈದಿಕರುಗಳ
ವಿಧಿವಿಹಿತ ವರಯಜ್ಞದಾನವು
ಸದಮಲದ ತಪವಂತು ಸತ್ಕರ್ಮಂಗಳಾದಿಯಲಿ ।
ಮುದದಲೋಮೆಂದುಚ್ಚರಿಸಿತಾ
ಪದುಳದಿಂದರ್ತಿಸುತಲಿಹುವೀ
ಪದವ ತಿಳಿ ನೀನೆಂದನಾಮುರವೈರಿ ಕರುಣದಲಿ ॥ ೨೪

ವರಮುಮುಕ್ಷುಗಳಿಂದ ತತ್ತೆಂ
ದಿರದೆ ಫಲವನು ಬಿಟ್ಟು ಯಜ್ಞವು
ಪಿರಿದೆನಿಪ ಸತ್ಕರ್ಮ ಬಹುವಿಧ ದಾನವೆಂಬಿನಿತು ।
ನಿರುತ ವಿರಚಿಸಿಕೊಳುತಲಿಹುದೀ
ತೆರದಿ ಬೊಮ್ಮವನರಿದು ಯೋಗೀ
ಶ್ವರರು ಬೊಮ್ಮವನೈದುವರು ಕಲಿಪಾರ್ಥ ಕೇಳೆಂದ ॥ ೨೫

ಪರತರಬ್ರಹ್ಮದಲಿ ಮೇಣ್ಸ
ತ್ಪುರುಷರಲಿ ಸಚ್ಛಬ್ದ ತಾನು
ಚ್ಚರಿಸಿ ಕೊಳುತಿರ್ಕುಂ ಪ್ರಶಸ್ತದ ಕರ್ಮದೊಳಗಂತು ।
ನಿರುತದಿಂದೀತೆರದಿ ತೋರುವ
ಪಿರಿದು ವಸ್ತುಗಳಲ್ಲಿಯುಂ ಗೋ
ಚರಿಸುವುದು ಸಚ್ಛಬ್ದವೆಲೆ ಕಲಿಪಾರ್ಥ ಕೇಳೆಂದ ॥ ೨೬

ವಿದಿತವಹ ಯಜ್ಞದಲಿ ತಪದಲಿ
ಸದಮಲದ ದಾನದಲಿ ಪುರುಷಂ
ಗುದಯಿಸಿದ ವರಭಕ್ತಿ ಸತ್ತೆಂದೆನಿಸಿಕೊಳುತಿಹುದು ।
ಅದರಿನಿಂಬಳಿಕೀಶ್ವರಾರ್ಪಣ
ಪದದ ಕರ್ಮವು ಸತ್ತೆನಿಸಿಕೊಂ
ಬುದು ಧನಂಜಯ ಕೇಳು ಸಚ್ಛಬ್ದದ ವಿಧಾನವಿದು ॥ ೨೭

ಪರಮಭಕ್ತಿಜ್ಞಾನವಿಲ್ಲದೆ
ನರರು ಮಾಡಿದ ಯಜ್ಞದಾನವ್ರ
ಬಿಂದಿಸಿದ ಸತ್ಕರ್ಮವೆಲ್ಲವಸತ್ತೆನಿಸುತಿಹುದು ।
ನಿರುತದಿಂ ಪರಮೇಶ್ವರಾರ್ಪಣ
ಭರಿತವಾಗದೊಡೆಲ್ಲ ತಾನಿಹ
ಪರಕೆ ಸಾಧನವಲ್ಲ ಭಾರತವಂಶ ಕೇಳೆಂದ ॥ ೨೮

- ಇಂತು ಶ್ರದ್ಧಾತ್ರಯವಿಭಾಗಯೋಗವೆಂಬ ಹದಿನೇಳನೇ ಅಧ್ಯಾಯ ಸಂಪೂರ್ಣಂ -

---

# ಹದಿನೆಂಟನೇ ಅಧ್ಯಾಯ - ಮೋಕ್ಷಯೋಗ

ಸೂಚನೆ ॥ ತ್ಯಾಗವನು ಸನ್ಯಾಸವನು ಗುಣ
ಭಾಗಕರ್ಮಂಗಳನು ಭಕ್ತಿಯೆ
ಯೋಗವನು ಪಾರ್ಥಂಗೆ ಬೋಧಿಸಿದನು ಮುರಧ್ವಂಸಿ ॥

ಬಲುಭುಜಂಗಳಲಸುರಕೇಶಿಯ
ಗೆಲಿದವನೆ ಸಕಲೇಂದ್ರಿಯಂಗಳ
ಬಲಕೆ ಕಾರಣನೆನಿಪ ಕೃಪಾನಿಧಿಯೆ ಕೇಳ್ವೆ ।
ನೆಲೆಯ ಸನ್ಯಾಸದ ಮಹಾತ್ಮನೆ
ಸಲೆಪರಿತ್ಯಾಗದ ನಿಜವ ನಾಂ
ತಿಳಿಯಲಿಚ್ಛೈಸುವೆನು ಕರುಣಿಪುದೆಂದನಾಪಾರ್ಥ ॥ ೧

ಆದೊಡರ್ಜುನ ಕಾಮ್ಯಕರ್ಮವ
ನಾದರಿಸಿ ಮಾಡದೆ ಬಿಡುವುದನು
ವೇದವಿದರಹಕವಿವರರು ಸನ್ಯಾಸವೆನುತಿಹರು ।
ಈಧರಿತ್ರಿಯೊಳಖಿಲಕರ್ಮಫ
ಲೋದಯವ ಬಿಟ್ಟಹುದನೇ ಶ್ರುತಿ
ಸಾಧಕರು ತಾಂ ತ್ಯಾಗವೆನುತಿಹ ರೆಂದನಸುರಾರಿ ॥ ೨

ಇತ್ತ ಕೆಲಬರು ಬುಧರು ಶ್ರುತಿಗಳು
ಪೆತ್ತಖಿಲಕರ್ಮವನು ಪಾಪದ
ವೃತ್ತಿಯನು ಬಿಡುವಂತೆ ಬಿಡಬೇಕೆಂದು ಹೇಳುವರು ।
ಮತ್ತೆ ಕೆಲರಧ್ವರತಪೋದಾ
ನೋತ್ತಮದ ಕರ್ಮವನು ಬಿಡುವುದು
ಪಥ್ಯವಲ್ಲೆಂದೆನುತಿಹರು ಕಲಿಪಾರ್ಥ ಕೇಳೆಂದ ॥ ೩

ಭರತಕುಲದೊಳಗುತ್ತಮೋತ್ತಮ
ನರನೆ ಕೇಳ್ ತ್ಯಾಗದಲಿ ವಿ
ಸ್ತರಿಸುವೆನು ಬಿಡದೆನ್ನ ನಿರ್ಧಾರಣವ ನಿನಗೊರೆದು ।
ಪರಮುನಿಗಳಿಂ ಕರ್ಮವಿಷಯದ
ಪರಿವಿಡಿಯಲೀತ್ಯಾಗ ತಾನೇ
ನಿರುತದಿಂದವೆ ಮೂರುತೆರನೆಂದೆನಿಸುತಿಹುದೆಂದ ॥ ೪

ಯಜ್ಞವಂ ದಾನವನು ತಪವಂ
ಪ್ರಾಜ್ಞರುಗಳಾಚರಿಸಬೇಹುದ
ವಜ್ಞೆಯನು ನೆರೆ ಮಾಡಿ ಬಿಡಲಾಗದು ವಿಚಾರಿಸಲು ।
ಯಜ್ಞದಾನತಪಂಗಳನು ತ
ಮ್ಮಜ್ಞತನವನು ಬಿಟ್ಟು ಮಾಡಲ
ಭಿಜ್ಞರಿಗೆಪುಣ್ಯಪ್ರದಂಗಳು ಪಾರ್ಥ ಕೇಳೆಂದ ॥ ೫

ಈಪರಿಯ ಸತ್ಕರ್ಮವನು ಫಲ
ರೂಪಸಂಗವ ಬಿಟ್ಟು ತಿಳಿದವ
ರಾಪರಮಪುರುಷಾರ್ಥಕೋಸುಗ ಕಾಲಕಾಲದಲಿ ।
ಆಪರಿಯಲೇ ಮಾಡಬೇಕಿಂ
ದೀಪರಿಯ ನಿರ್ಧಾರವೆನ್ನಯ
ದೀಪಿಸುವ ಸರ್ವೋತ್ತಮದ ಮತವೆಂದನಸುರಾರಿ ॥ ೬

ನಿತ್ಯವಹ ಕರ್ಮವನು ಬಿಡುತಿಹ
ದುಕ್ತವಲ್ಲಾನಿತ್ಯಕರ್ಮವ
ಮತ್ತನಾಗಜ್ಞಾನದಿಂ ಬಿಡುತಿರೆ ನಿಧಾನಿಸಲು ।
ಉತ್ತಮಪ್ರಜ್ಞರುಗಳಿಂದದು
ಮತ್ತೆ ತಾಮಸವೆನಿಸುವುದು ಪರ
ತತ್ತ್ವಸಾಧನವಲ್ಲ ತಾನಿದು ಪಾರ್ಥ ಕೇಳೆಂದ ॥ ೭

ಆವನೊಬ್ಬನು ದುಃಖವೆಂದೇ
ಭಾವಿಸಿ ತನುಕ್ಲೇಶಭಯದಿಂ
ದಾವಿಹಿತಕರ್ಮವನು ಬಿಡಲದು ರಾಜಸತ್ಯಾಗ ।
ಈವಿಕಾರತ್ಯಾಗವಂ ಮಾ
ಳ್ಪಾದಿಮೂಢಂ ತ್ಯಾಗಸಿದ್ಧಿಯ
ನಾವಪರಿಯಿಂ ಪಡೆಯಸೈ ಕಲಿಪಾರ್ಥ ಕೇಳೆಂದ ॥ ೮

ಮತ್ತೆ ಕೇಳೈ ನಿಯತಕರ್ಮವು
ನಿತ್ಯಮುಂ ಕರ್ತವ್ಯಮೆಂದೇ
ಚಿತ್ತದಲಿ ಫಲಸಂಗವನು ನೆರೆ ಬಿಟ್ಟು ಮಾಡಲಿಕೆ ।
ಸಾತ್ವಿಕತ್ಯಾಗವಿದು ತಾಂ ಸ
ರ್ವೋತ್ತಮದ ಮೋಕ್ಷಕ್ಕೆ ಸಾಧನ
ವಿತ್ತಲೆನ್ನಭಿಮತವೆನಿಸುವುದು ಪಾರ್ಥ ಕೇಳೆಂದ ॥ ೯

ಸತ್ವಗುಣದಲಿ ನೆಲಸಿ ಕರ್ಮಫ
ಲೋತ್ತಮತ್ಯಾಗವನು ಪಡೆದಾ
ಚಿತ್ತದಲಿ ಸಂದೇಹ ಹರಿದು ವಿವೇಕಿಯಾದವನು ।
ಮತ್ತೆ ಕೇಳೈ ಪಾಪಕರ್ಮದ
ಮೊತ್ತವಂ ದ್ವೇಷಿಸನು ಪುಣ್ಯನಿ
ಮಿತ್ತವಹ ಕರ್ಮದಲಿ ಸಿಲುಕನು ಪಾರ್ಥ ಕೇಳೆಂದ ॥ ೧೦

ಧರಿಸಿ ದೇಹವನಿರ್ಪನರರಿಂ
ನಿರುತದಿಂ ದೀಸಕಲಕರ್ಮವ
ಭರದಿ ಬಿಡಲಳವಲ್ಲವಾಗಿಯೆ ಕರ್ಮಫಲತತಿಯ ।
ಇರದೆ ಬಿಟ್ಟವನಾವ ನವನೇ
ಧರೆಯೊಳಗೆ ತಾಂ ತ್ಯಾಗಿಯೆನಿಪನು
ಕುರುಕುಲಾನ್ವಯುದವನೆ ಕೇಳೆಂದನು ಮುರಧ್ವಂಸಿ ॥ ೧೧

ವರಸುಕೃತಫಲವಿಷ್ಟ ಪಾಪದ
ಪರಿಯ ಫಲವದನಿಷ್ಟ ವದರಿಂ
ಪರಿಕಿಸಲು ಸುಖದುಃಖಮಿಶ್ರದ ಕರ್ಮವಿವು ಮೂರು ।
ಶರಿರವನು ಬಿಡೆ ಫಲವ ಬಯಸುವ
ನರರಿಗಿವು ದೊರಕೊಂಬುವೆಂದುಂ
ಭರದಿ ಸನ್ಯಾಸಿಗಳಿಗೊದಗವು ಪಾರ್ಥ ಕೇಳೆಂದ ॥ ೧೨

ಎಲೆಧನಂಜಯ ಸಾಂಖ್ಯಮತದಲಿ
ಹಲವು ಕರ್ಮದ ಸಿದ್ಧಿಗೋಸುಗ
ಮೊಲವಿನಿಂದೀಯೈದು ಕಾರಣವೆಂದು ಬುಧರಿಂದ ।
ನೆಲೆಗೆ ಹೇಳಿಸಿಕೊಂಬುವವಸುರೆ
ಚೆಲುವಿನಿಂದುಸುರುವೆನು ನೀ ಮನ
ಚಲಿಸದೇ ಕೇಳೆಂದನಾ ಮುರವೈರಿ ಕರುಣದಲಿ ॥ ೧೩

ಮೊದಲಧಿಷ್ಠಾನವು ಶರೀರವಿ
ದಿದರ ಕರ್ತೃವು ಜೀವ ದೇಹದೊ
ಳೊದವಿದೀಶ್ರೋತ್ರಾದಿಗಳ್ಹನ್ನೆರಡು ಕರಣಗಳು ।
ಇದರ ಚೇಷ್ಟೆಯು ದೈವ ಸಹಿತೀ
ವಿದಿತಪಂಚಕವಿದಕೆ ಕಾರಣ
ಸದಮಲನೆ ಕೇಳೆಂದನಾಗೋವಿಂದ ಮುದದಿಂದ ॥ ೧೪

ಮನುಜನೆನಿಸಿರ್ಪವನು ತನ್ನಯ
ಮನದಿವ ಚನದಿ ಕಾಯದಿಂ ತಾಂ
ವಿನುತವೈದಿಕಕರ್ಮವನು ಮೇಣ್ಪಾಪಕರ್ಮವನು ।
ಎನಿತ ಮಾಡುವನದಕೆ ಹಿಂದಣ
ತನುವಹಂಕಾರಾದಿಪಂಚಕ
ವನವರತ ಕಾರಣವೆನಿಸುತಿಹುದೆಂದನಸುರಾರಿ ॥ ೧೫

ಆದರಿನೀಕರ್ಮದಲಿ ನಾಂ ಪೇ
ಳಿದುದಧಿಷ್ಠಾನಾದಿಪಂಚಕ
ವಿದಿತದಿಂ ಕಾರಣವೆನಿಸುತಿರೆ ಸಕಲಕರ್ಮದಲಿ ।
ಸದಮಲಾತ್ಮನು ಕರ್ತೃವೆಂದೇ
ವದಡತನದಿಂ ಕಾಂಬನವ ತ
ತ್ವದವ ಕಾಣದ ಬಹಳ ದುರ್ಮತಿ ಯೆಂದನಸುರಾರಿ ॥ ೧೬

ಆವನೊಬ್ಬಗೆ ಕರ್ಮವೆಂಬೀ
ಭಾವ ತನಗಾಗಿಲ್ಲವದರಿಂ
ದಾವನಾವನ ಬುದ್ಧಿಫಲದಿಂ ಲೇಪವಡೆದಿರದು ।
ಭಾವಿಸಲಿಕವ ಹೇವವಿಲ್ಲದೆ
ಜೀವಲೋಕವ ಕೊಂದರೆಯು ತಾಂ
ಜೀವಹಿಂಸಕನಲ್ಲ ಪಾಪನಿಬದ್ಧನಲ್ಲೆಂದ ॥ ೧೭

ಪರಮಶಾಸ್ತ್ರಜ್ಞಾನಜ್ಞೇಯವು
ಪರಿವಿಡಿಯಲಾಜ್ಞಾತೃವೆಂಬಿವು
ನಿರುತದಿಂ ಕರ್ಮಪ್ರವರ್ತನ ಮೂರುತೆರನಹುದು ।
ಕರಣ ಕರ್ಮವು ಕರ್ತೃವೆಂಬೀ
ಪರಿಯ ಕರ್ಮದ ಕಾರಣವು ತಾ
ನಿರುತಿಹುದು ಮೂರಂದದಲಿ ಕಲಿಪಾರ್ಥ ಕೇಳೆಂದ ॥ ೧೮

ಮತ್ತೆ ಕೇಳ್ವೆಜ್ಞಾನ ಕರ್ಮವು
ಕರ್ತೃವಾಗುಣಭೇದದಿಂ ತಾಂ
ನಿತ್ಯವಾಗೊಂದೊಂದು ತೋರ್ಪುವು ಮೂರುಮೂರಾಗಿ ।
ಇತ್ತ ಗುಣಸಂಖ್ಯೆಯಲಿ ತಾ
ನೊಂಬತ್ತೆನಿಸಿ ತೋರ್ಪನಿತು ಭೇದವ
ಬಿತ್ತರಿಸಿ ಹೇಳುವೆನು ನೀ ಕೇಳೆಂದನಸುರಾರಿ ॥ ೧೯

ಫಲವ ಬಯಸುವನಿಂದ ಮೇಣೊಂ
ಮೊಲವಿನಿಂ ಕರ್ತೃತ್ವಭಾವವು
ಬಲಿದವನಿನಾಯಾಸದಿಂ ಕೃತವಿಹಪರಂಗಳಲಿ ।
ಸಲೆ ವಿಕರಿಸುತ್ತಿರ್ಪುದಾವುದು
ಫಲದ ಬಯಕೆಯ ಕರ್ಮ ತಾನದು
ನೆಲೆಗೆರಾಜಸಕರ್ಮವೆನಿಸುವುದೆಂದೆನಸುರಾರಿ ॥ ೨೪

ತನಗೆ ಪುರುಷಾರ್ಥಗಳ ಸಿದ್ಧಿಯ
ಮನಕೆ ತಾರದೆ ಪರರ ಹಿಂಸೆಯ
ಮನದ ಸಾಮರ್ಥ್ಯವನು ನೋಡದೆ ಮೂರ್ಖತನದಿಂದ ।
ಅನುಕರಿಸಿ ಮಾಡುತ್ತಲಿರುತಿಹ
ಧನದಪೇಕ್ಷೆಯ ಕರ್ಮ ಕೇಳ
ರ್ಜುನ ತಮೋಗುಣಜನಿತವೆನಿಸುವು ದೆಂದನಸುರಾರಿ ॥ ೨೫

ಮತ್ತೆ ಸಂಗವನುಳಿದು ದಿಟದಿಂ
ಕರ್ತೃ ತಾನಲ್ಲೆಂಬವನು ಧೃತಿ
ವೆತ್ತು ಸಂತೋಷವ ಧರಿಸಿ ನೆರೆ ಲಾಭನಷ್ಟದಲಿ ।
ಯುಕ್ತಿಯಿಂ ಸಮನೆನಿಸಿ ಕರ್ಮವ
ಭಕ್ತಿಯಿಂ ಮಾಡುವನರನು ಗುಣ
ಯುಕ್ತಸಾತ್ವಿಕಕರ್ತೃವೆನಿಪನು ಪಾರ್ಥ ಕೇಳೆಂದ ॥ ೨೬

ವಿಷಯಭೋಗಂಗಳಲಿ ನಿತ್ಯ
ವ್ಯಸನಿ ಕರ್ಮಂಗಳ ಫಲವ ಪಡೆ
ವೆಸಕವುಳ್ಳವ ಲೋಭಿ ಭೂತದ್ರೋಹಿಯಾದವನು ।
ಅಶುಚಿ ಫಲಸಂಪ್ರಾಪ್ತಿನಿಷ್ಠೆಯ
ಲೆಸೆವ ಹರ್ಷವಿಷಾದವೆರಡುಂ
ಮಿಸುಪ ಕರ್ತೃ ರಜೋಗುಣಕೆ ಕೇಳೆಂದನಸುರಾರಿ ॥ ೨೭

ನೀತಿಹೀನನಯುಕ್ತ ಶಠ ಜಡ
ಭೂತ ವಂಚಕನಲಸನಂತತಿ
ಭೀತನಿತ್ಯವಿಷಾದಿ ದುರ್ಜನ ದೀರ್ಘಸೂತ್ರಕನು ।
ಶ್ರೌತಕರ್ಮಂಗಳನು ಬಿಟ್ಟರು
ವಾತ ತಾಮಸಕರ್ತೃವೆನಿಪನು
ನೀ ತಿಳಿದು ನೋಡೈ ಧನಂಜಯ ಎಂದನಸುರಾರಿ ॥ ೨೮

ಎಲೆನರನೆ ಗುಣಭೇದದಿಂದವೆ
ನೆಲೆಗೆ ತೋರುವ ಬುದ್ಧಿಧೃತಿಗಳು
ಹೊಲಬಿನಲಿ ತಾಂ ಬೇರೆಬೇರಹ ಮೂರುಭೇದವನು ।
ತಳೆದಿಹುವು ಪೇಳುವುದ ಕೇಳ್ಳೈ
ಹಲವುಪರಿಯಿಂದೆಂದು ಲಕ್ಷ್ಮೀ
ಲಲನೆಯರಸನು ತಿಳುಹಿದನು ಧೃತರಾಷ್ಟ್ರಕೇಳೆಂದ ॥ ೨೯

ಘೋರಸಂಸಾರಪ್ರವೃತ್ತಿಯ
ಸಾರವೆನಿಪ ನಿವೃತ್ತಿಯನು ಸ
ತ್ಕಾರಿಯ ವಸತ್ಕಾರಿಯವನು ಭಯಾಭಯಂಗಳನು ।
ಧೀರ ಕೇಳ್ಸಂಸಾರಬಂಧದು
ದಾರಮೋಕ್ಷವ ನರಿವುದಾವುದು
ಚಾರುಸಾತ್ವಿಕ ಬುದ್ಧಿಯದು ಕೇಳೆಂದನಸುರಾರಿ ॥ ೩೦

ಆವುದೊಂದುದಯಿಸುವ ಬುದ್ಧಿಯ
ಭಾವದಿಂ ಧರ್ಮವನಧರ್ಮವ
ನಾವಸತ್ಕರ್ಮವನು ದುಷ್ಕರ್ಮವಧಾನಿಸಲು ।
ಆವನರನೆಲೆಯಾಗಿ ತಿಳಿಯನು
ಭಾವಿಸಲಿಕಾಬುದ್ಧಿತಾಂ ನಿಜ
ಭಾವದಿಂ ರಾಜಸವೆನಿಸುವುದು ಪಾರ್ಥ ಕೇಳೆಂದ ॥ ೩೧

ಇನ್ನು ಕೇಳು ತಮೋಗುಣದಿ ತಾ
ಮುನ್ನ ಮುಸುಕಿದ ಮತಿಯ ಧರ್ಮವ
ಸನ್ನುತದ ನಿಜಧರ್ಮವೆಂದೇ ಸಕಲ ವಸ್ತುಗಳ ।
ಭಿನ್ನವಿಪರೀತಂಗಳಾಗಿಯೆ
ಮುನ್ನರಿಯುತಿಹುದಾವುದದು ನೆರೆ
ಯನ್ಯತಾಮಸಬುದ್ಧಿಯೆನಿಸುಗ ಪಾರ್ಥ ಕೇಳೆಂದ ॥ ೩೨

ತನುಮನಃಪ್ರಾಣೇಂದ್ರಿಯಕ್ರಿಯೆ
ಘನತರದ ವರಯೋಗದಿಂ ನೆ
ಟ್ಟನೆ ಚರಿಸುವಂತಾವ ಧೃತಿಯಿಂ ಧರಿಸೆ ಪಟ್ಟಿಹುದು ।
ಮುನಿಗಳುಸುರುವ ಧೃತಿಯದೇ ತಾ
ನನಘಸಾತ್ವಿಕಧೃತಿಯೆನಿಸುತಿಹು
ದನಿಮಿಷಾಧಿಪತನಯ ಕೇಳೆಂದನು ಮುರಧ್ವಂಸಿ ॥ ೩೩

ಒಂದುನೆವದಿಂ ಕರ್ಮಫಲವನು
ಹೊಂದಲೆಂದನುಷಂಗದಿಂದಾ
ವೊಂದುಧೃತಿಯಿಂ ಧರ್ಮಕಾಮಾರ್ಥಂಗಳನು ನರನು ।
ನಿಂದು ಧರಿಸುತ್ತಿಹನು ಕೇಳಾ
ನಂದದಿಂದಾಧೃತಿ ರಜೋಗುಣ
ದಿಂದ ನೆರೆ ಸಂಜನಿತವೆನಿಸುವು ದೆಂದನಸುರಾರಿ ॥ ೩೪

ನಿರ್ಧರಿಸಿ ಕೇಳೈ ನರನೆ ದು
ರ್ಬುದ್ಧಿಯಹ ನರನಾವಧೃತಿಯಿಂ
ನಿದ್ರೆಭಯಶೋಕಂಗಳನು ಮುದವನು ವಿಷಾದವನು ।
ಹೊದ್ದಿ ತಾ ಬಿಡಲಾರದಿಹನು
ಬದ್ಧ ಧೃತಿಯದು ನೆರೆ ತಮೋಗುಣ
ವೃದ್ಧಿಯಿಂದವೆ ಜನಿಸಿತೆಂದರಿಯೆಂದನಸುರಾರಿ ॥ ೩೫

ತನ್ನ ಗೆಳೆಯನೆ ಬಿಡದೆ ಕೇಳು
ಭಾವಿಸು ಸುಖಸತ್ತ್ವದೊಳಿದ
ವೇದರಿಕೆಯಂತವನು ಕಾಂಬನು ಮಾನವೋತ್ತಮನು ।
ಜೀವಿಸದುಗಳ ಮೂರುಪರಿಯಿಂ
ತಾಪ್ರಗುಂದಿಪ್ಪಾಸುಖವ ನೀಂ
ಪಾವನನೆ ಕೇಳೆಂದನಾ ದನುಜಾರಿ ಕರುಣೆಯಲಿ ॥ ೩೬

ಪರತಪ್ರೋದ್ಯುಸ್ಥಾನಕಾಲದ
ಲಿರುತಿಹುದು ವಿಷದಂತೆ ಮೊದಲಲಿ
ನರನೆ ಕೇಳ್ಕೈ ಗಡೆಯಲಾವುದದಮೃತಕೆಣೆಯಹುದು ।
ನಿರುತದಿಂದಾಸುಖವು ತನ್ನಯ
ಪಿರಿದೆನಿಪ ಬುದ್ಧಿಪ್ರಸಾದದಿ
ದೊರಕೆ ಸಾತ್ತ್ವಿಕವೆನಿಸುವುದು ತಿಳಿಯೆಂದನಸುರಾರಿ ॥ ೩೭

ಆದಿಯಲಿ ವಿಷಯೇಂದ್ರಿಯಂಗಳ
ಸಾದರದ ಯೋಗದಿನಮೃತದೋ
ಪಾದಿ ಪರಿಣಾಮದಲಿ ಹಾಲಾಹಲದವೋಲಿಹುದು ।
ಭೇದವನು ತಿಳಿಯೈ ನರನೆ ಯೀ
ಹಾದಿ ರಾಜಸ ಸುಖವಿದೆಂಬರು
ವೇದವೇದಾಂತಜ್ಞರೆಲೆಕಲಿಪಾರ್ಥ ಕೇಳೆಂದ ॥ ೩೮

ಅಪ್ರವಾದ್ಯಂತಂಗಳೆರಡರೊ
ಳೀಪ್ರದೋಲ್ ತಾಂ ಮರವೆಯನು ನಿ
ದ್ರಾವಿಲಾಲಸ್ಯಪ್ರಮಾದಾದಿಗಳ ವಶದಿಂದ ।
ಜೀವದೊಳು ತೋರ್ಪಾಸುಖವು ನೆರೆ
ಭಾವಿಸಲು ತಾಮಸವೆನಿಪ್ಪುದು
ದೇವರಾಜತನೂಜ ಕೇಳೆಂದನು ಮುರಧ್ವಂಸಿ ॥ ೩೯

ಭೂಮಿಯಲಿ ಸಗ್ಗದಲಿ ಸುರನರ
ತಾಮಸಪಶುಪ್ರಭೃತಿನಾನಾ
ನಾಮರೂಪಂಗಳಲಿ ತೋರುವ ಸಕಲಜೀವಿಗಳು ।
ಈಮಹಾಪ್ರಕೃತಿಯೊಳುದಿಸಿದು
ದ್ದಾಮವೆನಿಸಿದ ಮೂರು ಗುಣದಿಂ
ತಾಮದೊಂದುಂ ಕೂಡಿದಿಹುದಿಲ್ಲೆಂದು ತಿಳಿಯೆಂದ ॥ ೪೦

ಎಲೆಧನಂಜಯ ಪಾರ್ವರಿಗೆ ಸ
ತ್ಕುಲದ ಬಾಹುಜವೈಶ್ಯರಿಗೆ ನಿ
ರ್ಮಲರೆನಿಪಶೂದ್ರರಿಗೆ ತಾಂ ಪ್ರಕೃತಿಯದೆಸೆಯಿನೊಗೆದ ।
ಸಲೆಗುಣತ್ರಯದಿಂದ ಕರ್ಮಂ
ಗಳು ವಿಭಾಗಿಸಿಕೊಂಡಿಹುವು ನಿನ
ಗೊಲವಿನಿಂದದನುಸುರುವೆನು ಕೇಳೆಂದನಸುರಾರಿ ॥ ೪೧

ಶಮೆದಮೆಗಳಾಸ್ತಿಕ್ಯ ತಪ ನಿ
ರ್ಮಮತೆ ಯಂತಃಕರಣಶುದ್ಧತೆ
ಸಮದ ಸೈರಣೆ ರಿಜುತನವು ನಿರ್ಮಲದ ವಿಜ್ಞಾನ ।
ಅಮಲಶಾಸ್ತ್ರಜ್ಞಾನವುಂತಾಂ
ಕ್ರಮದಲುದಿಸುಗು ವಿಪ್ರರೊಳಗು
ತ್ತಮರುಗಳಿಗೆ ನಿಸರ್ಗವಾಗಿಯೆ ಪಾರ್ಥ ಕೇಳೆಂದ ॥ ೪೨

ಕಲಿತನವು ತೇಜಸ್ಸು ಧೃತಿ ನಿ
ರ್ಮಲದ ದಕ್ಷತೆ ಸತ್ವಯುದ್ಧದ
ನೆಲದೊಳೋಡದೆ ಕಾದುವುದು ದಾನವನು ಮಾಡುವುದು ।
ಸಲೆಮಹೇಶ್ವರಭಾವವೆಂಬೀ
ಹಲವು ಕರ್ಮವು ಜನಿಸುವುವು ತೋ
ಳ್ವಲರ ಕುಲಕೆ ನಿಸರ್ಗದಿಂದಲೆ ಪಾರ್ಥ ಕೇಳೆಂದ ॥ ೪೩

ಕೃಷಿಯು ಮಾಡುವ ಗೋವ್ರಗಳ ರ
ಕ್ಷಿಸುವ ವ್ಯಾಪಾರವನು ತಾ ಸಂ
ವಿಸುವ ವೈಶ್ಯಂಗಿದು ನಿಸರ್ಗದ ಕರ್ಮವೆನಿಸುವುದು ।
ಎಸೆವ ವರ್ಣತ್ರಯವ ನೆರೆ ಸೇ
ವಿಸುತಿಹುದೆ ಶೂದ್ರಂಗೆ ಪ್ರಕೃತಿಯ
ವೆಸೆಯಲೊದವಿದ ಕರ್ಮವೆನಿಸುಗು ಪಾರ್ಥ ಕೇಳೆಂದ ॥ ೪೪

ತನ್ನ ತನ್ನ ಸುಕರ್ಮದಲಿ ಸಂ
ಪನ್ನವಿಷಯವನುಳ್ಳ ಮಾನವ
ನುನ್ನತೋನ್ನತಸತ್ವಶುದ್ಧಿಯ ಪಡೆಯುತಿಹನವನು ।
ತನ್ನ ಕರ್ಮದೆ ನಿರತನಾಗಿರೆ
ಸನ್ನಿಹಿತವರಮೋಕ್ಷವನು ತಾ
ನಿನ್ನುಪಡೆವಂದವನು ಕೇಳೆಂದನು ಮುರಧ್ವಂಸಿ ॥ ೪೫

ವ್ಯಕುತವಾಗಿಹು ದಾವನಿಂದವೆ
ಸಕಲಭೂತಕುಲಪ್ರವರ್ತನೆ
ಸಕಲ ಜಗನೆರೆ ಜನಿತವಾಗಿಹು ದಾಮಹೇಶಂಗೆ ।
ಭಕುತಿಯಿಂ ನಿಜಕರ್ಮದಿಂದ
ರ್ಚಕರೆನಿಪ ಮಾನವರು ಸಿದ್ಧಿಯ
ಪ್ರಕಟದಿಂ ಪಡೆವರು ನಿಧಾನವಿದೆಂದನಸುರಾರಿ ॥ ೪೬

ಸನ್ನುತಪ್ರಜ್ಞಾನ್ವಿತನೆ ಕೇ
ಳುನ್ನತೇಚ್ಛೆಯಿನಾಚರಿಸುತಿರು
ವನ್ಯರುತ್ತಮಧರ್ಮದಿಂದಂ ನ್ಯೂನವೆನಿಸುತಿಹ ।
ತನ್ನ ಧರ್ಮವೆ ಲೇಸು ನಿಯತದ
ತನ್ನ ಕರ್ಮವ ಮಾಡುತಿರ್ಪಾ
ಧನ್ಯನರ ಪಾಪವನು ಪಡೆಯನು ಪಾರ್ಥ ತಿಳಿಯೆಂದ ॥ ೪೭

ಎಲೆ ಧನಂಜಯ ತನ್ನ ಕರ್ಮವು
ಕೆಲವುದೋಷವ ಸುಳ್ಳೊಡೆಯು ತಾ
ನಲಸಿ ಬಿಡಲಾಗದು ಕಣಾ ತನ್ನುಕ್ತಕರ್ಮವನು ।
ಬಲಿದ ಹೊಗೆಯಿಂ ದಗ್ನಿಯಂದದಿ
ಹಲವು ದೋಷದಿ ಸಕಲಕರ್ಮವು
ಸಲೆ ಸಮಾವೃತವಾಗಿಹುವು ಕೇಳೆಂದನಸುರಾರಿ ॥ ೪೮

ಸಕಲವಿಷಯಸುಖಾನುಭವದಾ
ಸಕುತಿ ಹೊದ್ದದ ಬುದ್ಧಿಯಿಂದಂ
ತಕಪಟಾಂತಃಕರಣನಿಷ್ಠೆಯನುಳ್ಳ ನಿಸ್ಪೃಹನು ।
ಯುಕುತವಹ ಸುಜ್ಞಾನದಿಂದಲಿ
ಸುಕರನಿಷ್ಕರ್ಮತೆಯ ಸಿದ್ಧಿಯ
ಭಕುತಿಯಿಂದೈದುವನು ನಿಜವಿದು ಪಾರ್ಥ ಕೇಳೆಂದ ॥ ೪೯

ಜ್ಞಾನಸಿದ್ಧಿಯ ಪಡೆದ ಮನುಜನು
ತಾನು ಬೊಮ್ಮವ ಪಡೆವನೆಂತದ
ನಾನು ನಿನಗುಸುರುವೆನು ಸಂಕ್ಷೇಪದಲಿ ನಿಜದಿಂದ ।
ಜ್ಞಾನನಿಷ್ಠೆಯದಾವುದೊಂದು ನಿ
ಜಾನುಭವವಾಗಲ್ಕೆ ತನ್ನಿಂ
ನೀನರಿದು ಸುಖಿಯಾಗು ಬೇಗದಲೆಂದನಸುರಾರಿ ॥ ೫೦

ಶುದ್ಧವಾಗಿಹ ಬುದ್ಧಿಯಿಂ ಕೂ
ಡಿರ್ದ ಯೋಗೀಶ್ವರನು ಧೃತಿಯಿಂ
ಗೆದ್ದುನೆರೆ ತನ್ನಾತ್ಮವನು ನಿಯಮಿಸಿ ವಿರಾಗದಲಿ ॥
ಶಬ್ದಮೊದಲಾದಖಿಲವಿಷಯವ
ಹೊದ್ದದೇ ಕರಣಂಗಳಿಂ ನಿಜ
ವಿದ್ಯೆಯಿಂ ಕಾಮಾದಿಗಳ ಗೆಲೆಮುಕ್ತನಹನೆಂದ ॥ ೫೧

ವಿರತಿಯಿಂ ದೇಶಾಂತದಲ್ಲಿಪ್ಪ
ಕಿರಿಯನಲ್ಪಾಹಾರನಿರತನು
ಧರಿಸಿ ತನುವಾಕ್ಮನವ ನಿಯಮಿಸಿದವನು ನಿತ್ಯದೊಳು ।
ಪರಮಾತ್ಮಧ್ಯಾನಯೋಗದ
ಲಿರಲು ವೈರಾಗ್ಯಮಾತ್ರ ಸಿದ್ಧಿಯು
ನಿರದೆ ಪಡೆವನು ಕೇಳು ನರ ಪರಮಾರ್ಥ ತಾನೆಂದು ॥ ೫೨

ಹಿರಿಯಹಂಕಾರವನು ಬಲವನು
ಪರುಷಕಾಮಕ್ರೋಧದರ್ಪವ
ಸರಿದವನುಬಂಧದ ಪರಿಗ್ರಹವೆಲ್ಲವನು ಬಿಟ್ಟು ।
ಧರದಿ ಮಮಕಾರಂಗಳಿಲ್ಲದೆ
ಪರಮಶಾಂತಿಯ ನುಳ್ಳಮನುಜನು
ನಿರುತದಿಂ ಪರಬೊಮ್ಮನಹುದಕೆ ತಕ್ಕನಹನೆಂದ ॥ ೫೩

ಬೊಮ್ಮವಾದ ಪ್ರಸನ್ನಚಿತ್ತನು
ನಿರ್ಮರುತೆಯಿಂ ಶೋಕಿಸನು ನಿಜ
ಧರ್ಮವಿಷಯಂಗಳನೆಳಸನು ಚರಾಚರಂಗಳಲಿ ।
ಒಮ್ಮೆಯೇ ಸರ್ವಾತ್ಮಭಾವವ
ನೆಮ್ಮಿ ಸಮವಾಗೆನ್ನ ನೋಡುತ
ನಿರ್ಮಲದ ಮದ್ಭಕ್ತಿಯನು ಪಡೆವನು ಕಣಾ ಎಂದ ॥ ೫೪

ಪರಭಕುತಿಯಿಂ ದೆನ್ನನರಿದಾ
ನರನು ನಿಜಪರಮಾತ್ಮರೂಪಿಂ
ಪರಮನಹ ತಾನಾವನೆಂದವನೆನ್ನ ನಿಶ್ಚಯದಿ ।
ನಿರುತದಿಂದವೆ ತಿಳಿದನಂತರ
ಭರದಲೆನ್ನನಭೇದರೂಪಿಂ
ವಿರದೆ ಬೆರಸುವನಿದಕೆ ಸಂಶಯವಿಲ್ಲ ಕೇಳೆಂದ ॥ ೫೫

ಸರ್ವಭಾವಂಗಳಲಿ ನನ್ನನೆ
ಸರ್ವಥಾ ಆಶ್ರಯಿಸಿದಾತನು
ಸರ್ವಕಾಲಂಗಳಲಿ ಮಾಡುತಸರ್ವಕರ್ಮವನು ।
ಸರ್ವಥಾ ಎನ್ನಲಿ ಸಮರ್ಪಿಸಿ
ನಿರ್ವಚನದಿಂದೆನ್ನ ಕರುಣದಿ
ಸರ್ವಥಾ ಕೇಡಿಲ್ಲದಿಹ ನಿಜಪದವನೈದುವನು ॥ ೫೬

ಮನದಿ ವಚನದಿ ಸಕಲಕರ್ಮವ
ನನವರತವೆನ್ನಲಿ ಸಮರ್ಪಿಸಿ
ವಿನುತಮತ್ಪರನಾಗಿ ಪರತರಬುದ್ಧಿಯೋಗವನು ।
ಅನುನಯದಲಾಶ್ರಯಿಸಿ ಬಿಡದನು
ದಿನದೊಳೆನ್ನಲಿ ನಿಲಿಸಿ ಕರಗಿದ
ಮನವನುಳ್ಳವನಾಗು ನೀನೆಂದ ಸುರರಿಪು ಸುಡಿದ ॥ ೫೭

ಎಲೆಧನಂಜಯ ಎನ್ನೊಳೀ ಪಿರಿ
ದೊಲಿದದೆಂದುಂ ನಿನ್ನ ಚಿತ್ತವ
ನಿಲಿಸಲೆನ್ನಯ ಕರುಣದಿಂ ಮೋಕ್ಷಕ್ಕೆ ಹಗೆಯಾದ ।
ಹಲವು ದುಸ್ತರಮಾದದುರ್ಗಂ
ಗಳ ಗೆಲುವೆ ಯೀಮತವ ಹಮ್ಮಿಂ
ಒಲಿದು ಕೇಳದೆ ಮೂರ್ಖನಾಗಿರೆ ಕೆಡುವೆ ನೀನೆಂದ ॥ ೫೮

ಎತ್ತಲಾನುಂ ನಿನ್ನ ಹಮ್ಮಿಂ
ದಿತ್ತ ಯುದ್ಧವನೊಲ್ಲೆನೆಂದೇ
ಚಿತ್ತದಲಿ ನೆರೆ ಬಗೆದೆಯಾದೊಡೆ ನಿನ್ನ ಬಗೆ ಬಳಿಕ ।
ಸತ್ಯವಾಗದು ತಾಂ ಪ್ರಕೃತಿ ಬೆಂ
ಬತ್ತಿ ನಿನ್ನಿಂ ಬಲಿಪಿನಿಂ ಕೆಡೆ
ಯೊತ್ತಿ ಯುದ್ಧವ ಮಾಡಿಸದೆ ಬಿಡದೆಂದನಸುರಾರಿ ॥ ೫೯

ಎಲೆಪಿಂಡಯನೇ ಪ್ರಕೃತಿಯಿಂದವೆ
ನೆಲೆಗೆ ಮುನ್ನವೆ ಜನಿತವಾಗಿಹ
ಬಲಿದ ನಿನ್ನಯ ಕರ್ಮದಿಂದವೆ ಬಿಗಿವಡೆದ ನೀನು ।
ಫಲದಲಾವುದ ಮಾಡೆನೆಂದೆನು
ತುಳಿದೊಡಂ ಸ್ವಪ್ರಕೃತಿಯಿಂದದ
ಚಲಿಸಿ ಪರವಶನಾಗಿ ಮಾಡುವೆ ಪಾರ್ಥ ಕೇಳೆಂದ ॥ ೬೦

ನಿರುತದಿಂ ಪರಮೇಶ್ವರನು ವಿ
ಸ್ತರದ ಸಚರಾಚರದ ಹೃದಯದ
ಲಿರುತಕರ್ಮದ ಯಂತ್ರದಿಂ ಬಿಗಿವಡೆದು ಬಿದ್ದಿರ್ಪ ।
ನೆರೆದ ಭೂತಂಗಳನು ಮಾಯೆಯ
ಪರಿವಿಡಿಯ ನರ್ತನೆಗಳಿಂ ನೆರೆ
ತಿರುಗಿಸುತಲಿಹನನವರತ ಕೇಳೆಂದನಸುರಾರಿ ॥ ೬೧

ಆಮಹೇಶನ ಮರೆಯ ಹೊಗು ನೀಂ
ಪ್ರೇಮದಿಂದಲಿ ಸರ್ವಭಾವದೊ
ಳಾಮಹಾತ್ಮನ ದಿವ್ಯಕರುಣಾಮೃತದ ವರುಷದಲಿ ।
ಕ್ಷೇಮದಿಂದಲಿ ಪಡೆದು ಶಾಂತಿಯ
ನಾಮಹಿತಶಾಶ್ವತಪದವನೆಲೆ
ಭೀಮಸೋದರ ನೀನು ಸೇರುವೆಯೆಂದನಸುರಾರಿ ॥ ೬೨

ಎಲೆಧನಂಜಯ ಶಾಸ್ತ್ರದೊಳಗಣ
ನೆಲೆಯೆನಿಪ ಸುಜ್ಞಾನವನು ತಾ
ನೊಲಿದು ಪೇಳಿದೆ ಪರಮಸಖ ಬಾಂಧವನು ನೀನೆಂದು ।
ಉಳುಹದೊಂದುವ ನಿದರೊಳೆಲ್ಲವ
ನೊಲಿದು ಸಂತತದೊಳು ವಿಚಾರಿಸಿ
ತಿಳಿದು ಬಯಸಿದತೆರದಿ ನೀ ಮಾಡೆಂದನಸುರಾರಿ ॥ ೬೩

ಮತ್ತೆ ಕೇಳ್ಳೆ ನೀನೆನಗೆ ಕಡು
ಮಿತ್ರನಾದ ನಿಮಿತ್ತದಿಂ ನಿನ
ಗುತ್ತಮದ ಹಿತವಾದಖಿಲದಿಂ ಗೋಪ್ಯವೆನಿಸು ತಿಪ ।
ಸತ್ಯವಹ ವಾಕ್ಯವನು ಕೃಪೆಯಿಂ
ವಿಸ್ತರಿಸುವೆನು ನೀನು ನಿರ್ಮಲ
ಚಿತ್ತದಿಂದವಧರಿಸಿ ಕೇಳಿದನೆಂದನಸುರಾರಿ ॥ ೬೪

ಮನವನೆನ್ನಲಿ ನಿಲಿಸು ನೀನನು
ದಿನ ಬಕುತನಾಗೆನ್ನ ಪೂಜಿಸು
ವಿನುತಸಾಷ್ಟಾಂಗಂಗಳಿಂದೆನ್ನನು ನಮಸ್ಕರಿಸು ।
ಇನಿತರಲಿ ನೀನೆನ್ನನೈದುವೆ
ಯೆನಗೆ ನೀಂ ಪ್ರಿಯನಾದುದರಿನೀ
ಘನತರದ ಸತ್ಯಪ್ರತಿಜ್ಞೆಯ ವಿರಚಿಸಿದೆನೆಂದ ॥ ೬೫

ಬಿಡು ಸಕಲಧರ್ಮಂಗಳನು ನೀ
ತಡೆಯದೆನ್ನೊಬ್ಬನನೆ ಮರೆಹೋಗು
ಬಿಡಿಸುವೆನು ನಾನಖಿಲಪಾತಕದಿಂದ ನಿನ್ನುವನು ।
ಅಡಿಗಡಿಗೆ ಶೋಕವನು ಮಾಡಿದಿ
ರೊಡೆಯನಾನಿರಲಂಜಬೇಡಂ
ದೊಡಬಡಿಸಿದನು ಕಷ್ಣರಾಯನು ಸುರಪನಂದನನ ॥ ೬೬

ನಿನಗೆ ಪೇಳ್ದೀಶಾಸ್ತ್ರಸಾರವ
ಮನುಜರೊರ್ತಪ ವಿಲ್ಲದಾತಂ
ಗನುನಯದ ಲೀಶ್ವರನು ಭಕ್ತಿಯದಿಲ್ಲದಾತಂಗೆ ।
ವಿನುತಗುರುಸೇವೆಯನೆಸಗದಂ
ಗೆನಗಸೂಯಿಸುತಿರ್ಪ ದುರ್ಮತಿ
ಗಿನಿತನೆಂದುಂ ಹೇಳಲಾಗದು ಪಾರ್ಥ ಕೇಳೆಂದ ॥ ೬೭

ಆವನೆನ್ನಯ ಪರಮಭಕ್ತರು
ಭಾವವನು ನೆರೆ ಮಾಡಿ ಬಳಿಕತಿ
ಪಾವನೋತ್ತಮಗೋಪ್ಯವೆನಿಪೀಗೀತೆಯನು ಮುದದಿ ।
ಆವಪರಿಯಿಂ ದೆನ್ನಭಕ್ತರ
ನಾವಳಿಗೆ ಬೋಧಿಸುವ ನವನೆ
ನ್ನಾವಿಮಲಪದವೈದುವನು ಸಂದೇಹವಿಲ್ಲೆಂದ ॥ ೬೮

ಮನುಜರೊಳಗೀ ಗೀತೆಯನು ಮೇ
ದಿನಿಯೊಳೊಲವಿಂ ಪ್ರಕಟಿಸುವ ಭ
ಕ್ತನು ಕಣಾ ಕೇಳೆನಗತಿಪ್ರಿಯ ಹಿತವನಾಗಿಹನು ।
ಎನಗೆ ಕೇಳವನಿಂದತಿಪ್ರಿಯ
ನೆನಿಸುವನು ಬೇರೊಬ್ಬನಿಲ್ಲಾ
ಗನುನಯದಲವನಿಂದ ನಾನತಿತುಷ್ಟನಹೆನೆಂದ ॥ ೬೯

ಆವನೀನಮ್ಮಿಬ್ಬರಿಂ ಸಂ
ಭಾವಿಸಿದ ವರಧರ್ಮಸಂಬೋ
ಧಾವಳಿಯ ನೋದುವನು ತತ್ವಜ್ಞಾನದಾಕ್ರತುವಿಂ ।
ಪಾವನೋತ್ತಮನೆನಿಸುವವನಿಂ
ಭಾವದಿಂ ನಾಂ ಯಜಿಸಿಕೊಂಡವ
ನೀವಿಧದಿ ಸಂತುಷ್ಟನಪ್ಪೆನಿದೆನ್ನ ಮತವೆಂದ ॥ ೭೦

ದೇವನೆನಿಪೆನ್ನಲ್ಲಿ ಮಾನುಷ
ಭಾವದಿಂದ ಲಸೂಯೆಮಾಡದೆ
ಭಾವಶುದ್ಧಿಯ ಲಾವನೀಗ್ರಂಥವನು ಕೇಳುವನು ।
ಆವಿವಿಧಪಾಪಂಗಳನು ತಾಂ
ಸೇವಿಸದೆ ಬಿಡುಗಡೆವಡೆದು ಶುಭ
ಪಾವನಕ್ರಿಯರುಳ್ಳ ಲೋಕವ ಪಡೆವನವನೆಂದ ॥ ೭೧

ವರಧನಂಜಯ ನಿನಗೆ ನಾ ನಿ
ಬ್ಬರವಲೊರೆದೀಗೀತೆಯರ್ಥವ
ವರುಷದಿಂ ದೇಕಾಗ್ರಚಿತ್ತದಿ ಕೇಳಿದೆಯ ನೀನು ।
ಹರಿದುದೇನಜ್ಞಾನತಮವೆಂ
ದಿರದೆ ಹರಿ ಪಾರ್ಥನನು ಘನಸಂ
ಗರದೊಳಗೆ ಬೆಸಗೊಂಡನೆಲೆಧೃತರಾಷ್ಟ್ರ ಕೇಳೆಂದ ॥ ೭೨

ದೇವ ಬಿನ್ನಹ ನಿಮ್ಮ ಕಾರು
ಣ್ಯಾವಲೋಕನದಿಂದಲೆನ್ನಗು
ಣಾವಲಂಬನದಜ್ಞತನ ನೆರೆ ಕೆಟ್ಟುದದರಿಂದ ।
ಜೀವಭಾವವನುಳಿದು ನಿಜ ಸಂ
ಭಾವಿಸಿತು ಸಂದೇಹ ಬೀತುದು
ದೇವ ನೀ ಹೇಳಿದುದ ಮಾಡುವೆನೆಂದನಾಪಾರ್ಥ ॥ ೭೩

ಈಪರಿಯಲಿ ಮಹಾತ್ಮನೆನಿಪಾ
ಶ್ರೀಪತಿಯ ಪಾರ್ಥನ ಮಹಾದ್ಭುತ
ರೂಪವಹ ರೋಮಾಂಚನದ ಸಂವಾದವನು ನಾನು ।
ಭೂಪ ಕೇಳಿದೆನೆಂದು ಸಂಜಯ
ನೀಪರಿಯೊಳೆನುತಿರ್ದದನು ಕುರು
ಭೂಪ ಕೇಳೀನೆಂದು ವೈಶಂಪಾಯನನು ನುಡಿದ ॥ ೭೪

ವ್ಯಾಸಪರಮರ್ಷಿಪ್ರಸಾದದಿ
ಲೇಸೆನಿಪ ನೆರೆ ಗೋಪ್ಯವೆನಿಸಿ
ಪ್ಪೀಸಕಲಶಾಸ್ತ್ರಾರ್ಥಯೋಗವ ಯೋಗಪತಿಯೆನಿಪಾ ।
ವಾಸುದೇವನೆ ತನಗೊಲಿದನಹ
ವಾಸವಾತ್ಮಭವಂಗೆ ಮನವೊಲಿ
ದೀಸನೊರೆದುದ ಕೇಳ್ದೆನಾಂ ಧೃತರಾಷ್ಟ್ರಕೇಳೆಂದ ॥ ೭೫

ಕೇಳು ಧೃತರಾಷ್ಟ್ರಾವನಿಪ ಗೋ
ಪಾಲಕೃಷ್ಣಂಗರ್ಜುನಂಗೆಯು
ಮೇಳವಿಸಿದತಿಪುಣ್ಯಸಂವಾದದ ಮಹಾದ್ಭುತವ ।
ಕೇಳಿ ನೆನೆನೆನೆದಡಿಗಡಿಗೆ ಮನ
ದೇಳಿಗೆಯ ಸಂತೋಷವನು ನೆರೆ
ತಾಳಿದೆನು ನಾನೆಂದು ಸಂಜಯ ನೊರೆದನೊಲವಿನಲಿ ॥ ೭೬

ಅರಸ ಕೇಳೈ ವಾಸುದೇವನು
ವರಮಹಾದ್ಭುತವೆನಿಸೆ ತೋರಿದ
ಹಿರಿದೆನಿಸಿದಾವಿಶ್ವರೂಪವ ಬಿಡದೆ ನೆನೆನೆನೆದು ।
ಇರದೆನಗೆ ಬೆರಗಾಗುತಿದೆ ವಿ
ಸ್ತರಿಸಿ ಕೇಳೆನಗಡಿಗಡಿಗೆ ಘನ
ಹರುಷವುದಯಿಪುದೆಂದು ಮುದದಲಿ ಸಂಜಯನು ನುಡಿದ ॥ ೭೭

ಎಲ್ಲಿ ಯೋಗಂಗಳಿಗೊಡೆಯನಹ
ಸಲ್ಲಲಿತ ನಾಕೃಷ್ಣನಿಹನಿ
ನ್ನೆಲ್ಲಿ ಧನುವನು ಧರಿಸಿಕೊಂಡರ್ಜುನನು ನೆಲಸಿಹನು ।
ಅಲ್ಲಿಹಳು ವರಲಕ್ಷ್ಮಿ ಜಯಸಿರಿ
ಯಲ್ಲಿ ಪರಮೈಶ್ವರ್ಯನೀತಿಗ
ಳಲ್ಲಿ ನೆಲಸಿಹುವೆನ್ನ ಮತ ಧೃತರಾಷ್ಟ್ರಕೇಳೆಂದ ॥ ೭೮

ಕೇಳು ಜನಮೇಜಯ ಧರಿತ್ರೀ
ಪಾಲ ಕುರುಭೂಮಿಯಲಿ ಕೃಷ್ಣಕ
ಪಾಳುಫಲ್ಗುನರುಭಯಸೇನೆಯ ಮಧ್ಯದಲಿ ರಥದಾ ।
ಮೇಲೆ ಸಂವಾದಿಸಿದ ಧರ್ಮವ
ಹೇಳಿದನು ಸಂಜಯನು ಕುರುಭೂ
ಪಾಲಧೃತರಾಷ್ಟ್ರಂಗೆ ಹರುಷದಲೆಂದು ಮುನಿ ನುಡಿದ ॥ ೭೯

- ಇಂತು ಮೋಕ್ಷಸಂನ್ಯಾಸಯೋಗವೆಂಬ
ಇಂತು ಕರ್ಣಾಟಕ ಭಗವದ್ಗೀತೆ ಮುಗಿದುದು.

ಶ್ರೀಕೃಷ್ಣಾರ್ಪಣಮಸ್ತು

ಪಾದದೊಳು ಹದಿನಾಲ್ಕು ಮಾತ್ರೆಯೊ
ಳಾದುದೀ ಭಾಮಿನಿಯ ಷಟ್ಪದಿ
ಪಾದದೆರಡನೆಯಕ್ಕರವೆ ತಾಂ ಪ್ರಾಸವೆನಿಸುವುದು ।
ಈಧರೆಯೊಳೀ ಗೀತೆಯರ್ಥವ
ನೈದೆ ಪದಕೊಂದೊಂದು ಗ್ರಂಥವ
ಸಾಧಕರು ತಿಳಿವಂತೆ ಕನ್ನಡದಿಂದ ರಚಿಸಿದೆನು ॥

ನಾಗರಸ ಕವಿ

## ನಾಗರಸನ
## ಕರ್ಣಾಟಕ ಭಗವದ್ಗೀತೆ

ನಾಗರಸನು ರಚಿಸಿರುವ ಏಕೈಕ ಕೃತಿ ಕರ್ಣಾಟಕ ಭಗವದ್ಗೀತೆ. ಈ ಪುಸ್ತಕವನ್ನು ಓದುವಾಗ ಅದರ ಸರಳ ಕನ್ನಡ ಭಾಷೆಯನ್ನು ಓದಿ ನನಗೆ ತುಂಬ ಸಂತೋಷವಾಯ್ತು.

ಭಗವದ್ಗೀತೆಯ ಒಂದು ಶ್ಲೋಕಕ್ಕೆ ಒಂದೇ ಭಾಮಿನಿ ಷಟ್ಪದಿಯಲ್ಲಿ ಅನುವಾದ ಮಾಡಿರುವುದು ಎಷ್ಟು ಸೂಕ್ತವಾಗಿದೆ ಎಂದರೆ ಸಾಮಾನ್ಯ ಓದುಗರಿಗೆ ಕೂಡ ಮೂಲಗ್ರಂಥದ ಅರಿವಾಗಬಹುದು ಎಂಬುದು ಸ್ಪಷ್ಟವಾಗುತ್ತದೆ.

ಹದಿನೆಂಟನೆಯ ಶತಮಾನದ ಕನ್ನಡದ ಆಡುಮಾತಿಗೆ ಅದು ಹತ್ತಿರವಾಗಿದೆ. ತಂದೆಯಿಂದ ಸಂಸ್ಕೃತವನ್ನು ಕಲಿತ ನಾಗರಸನು ಶಂಕರರೆಂಬ ಗುರುಗಳಿಂದ ಭಗವದ್ಗೀತೆಯನ್ನು ಚೆನಾಗಿ ... ಮಾಡಿರಬೇಕು. ಆ ಗ್ರಂಥವನ್ನು ಕನ್ನಡಕ್ಕೆ ಅನುವಾ... ಆಸೆಯಿಂದ ಶಂಕರಗುರುಗಳ ಕಣ್ಣರಿಕೆಯಲ್ಲಿ ಈ ಕೆಲಸವನ್ನು ಸ... ಇದು ತುಂಬ ಕಷ್ಟವಾದ ಕಾರ್ಯ. ಆದರೆ ನಾಗರಸನು ಅದರಲ್ಲಿ ಸಫಲನಾಗಿದ್ದಾನೆ.

ಪ್ರೊ॥ ಜಿ. ವೆಂಕಟಸುಬ್ಬಯ್ಯ